# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೫೦<br>Volume 150 | ಬೆಂಗಳೂರು, ಗುರುವಾರ, ಜನವರಿ ೮, ೨೦೧೫ (ಪುಷ್ಯ ೧೮, ಶಕ ವರ್ಷ ೧೯೩೬)<br>Bengaluru, Thursday, January 8, 2015 (Pushya 18, Shaka Varsha 1936) | ಸಂಚಿಕೆ ೨<br>Issue 2 |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಬಯಲುಸೀಮೆ ಪ್ರದೇಶಾಭಿವೃದ್ಧಿ ಮಂಡಳಿ, ಚಿತ್ರದುರ್ಗದ 2014–15ನೇ ಸಾಲಿನ ವಾರ್ಷಿಕ ಕ್ರಿಯಾ ಯೋಜನೆಯ ಬಗ್ಗೆ.

**ಓದಲಾಗಿದೆ :** ಕಾರ್ಯದರ್ಶಿ, ಬಯಲುಸೀಮೆ ಪ್ರದೇಶಾಭಿವೃದ್ಧಿ ಮಂಡಳಿ, ಚಿತ್ರದುರ್ಗ ಇವರ ಪತ್ರ ಸಂಖ್ಯೆ:ಬಸಿಪ್ರಮಂ/ಚಿ/ಕ್ರಿಯೋ/2014–15/178, ದಿನಾಂಕ: 7/18–07–2014.

**ಪ್ರಸ್ತಾವನೆ:**

ಬಯಲುಸೀಮೆ ಪ್ರದೇಶಾಭಿವೃದ್ಧಿ ಮಂಡಳಿ, ಚಿತ್ರದುರ್ಗಕ್ಕೆ 2014–15ನೇ ಸಾಲಿನಲ್ಲಿ ಒದಗಿಸಿರುವ ಅನುದಾನ ಮತ್ತು ಮಂಡಳಿಯಲ್ಲಿ ದಿನಾಂಕ:01–04–2014ರಲ್ಲಿದ್ದ ಶಿಲ್ಕಿನ ವಿವರಗಳು ಈ ಕೆಳಕಂಡಂತಿದೆ:

| ಕ್ರಮ ಸಂಖ್ಯೆ | ಲೆಕ್ಕಶೀರ್ಷಿಕೆ | ಆರಂಭಿಕ ಶಿಲ್ಕು (01–04–2014ರಲ್ಲಿದ್ದಂತೆ ( ₹ ಲಕ್ಷಗಳಲ್ಲಿ) | 2014–15ನೇ ಸಾಲಿನಲ್ಲಿ ಒದಗಿಸಿರುವ ಅನುದಾನ ( ₹ ಲಕ್ಷಗಳಲ್ಲಿ) | ಲಭ್ಯವಾಗುವ ಅನುದಾನ ( ₹ ಲಕ್ಷಗಳಲ್ಲಿ) |
|---|---|---|---|---|
| 1 | 2515–00–103–0–03–101 (ಸಹಾಯಾನುದಾನ) | 59.14 | 115.00 | 174.14 |
| 2 | 2515–00–103–0–03–132 (ಬಂಡವಾಳ ವೆಚ್ಚ) | 399.14 | 1386.20 | 1785.34 |
| 3 | 2515–00–103–0–03–422 (ವಿಶೇಷ ಘಟಕ ಯೋಜನೆ) | 346.76 | 360.80 | 707.56 |
| 4 | 2515–00–103–0–03–423 (ಗಿರಿಜನ ಉಪ ಯೋಜನೆ) | 122.76 | 138.00 | 260.76 |
| 5 | ನಬಾರ್ಡ್ | 54.86 | – | 54.86 |
| | ಒಟ್ಟು | **982.66** | **2000.00** | **2982.66** |

ಮೇಲೆ ಓದಲಾದ ಪತ್ರದಲ್ಲಿ ಕಾರ್ಯದರ್ಶಿ, ಬಯಲುಸೀಮೆ ಪ್ರದೇಶಾಭಿವೃದ್ಧಿ ಮಂಡಳಿ, ಚಿತ್ರದುರ್ಗ ಇವರು 2014–15ನೇ ಸಾಲಿನಲ್ಲಿ ಲಭ್ಯವಾಗುವ ರೂ.2982.66 ಲಕ್ಷಗಳಿಗೆ ಹೆಚ್ಚುವರಿ ರೂ.1000.00 ಲಕ್ಷಗಳನ್ನು ಸೇರಿಸಿ ಒಟ್ಟು ರೂ.3982.66 ಲಕ್ಷಗಳಿಗೆ ವಾರ್ಷಿಕ ಕ್ರಿಯಾ ಯೋಜನೆಯನ್ನು ತಯಾರಿಸಿ ದಿನಾಂಕ: 30–05–3014 ರಂದು ನಡೆದ ಮಂಡಳಿಯ ಸರ್ವಸದಸ್ಯರ ಸಭೆಯಲ್ಲಿ ಅನುಮೋದನೆ ಪಡೆದುಕೊಂಡಿದ್ದು, ಸದರಿ ವಾರ್ಷಿಕ ಕ್ರಿಯಾ ಯೋಜನೆಗೆ ಸರ್ಕಾರದ ಅನುಮೋದನೆ ನೀಡುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮಂಡಳಿಯ 2014–15ನೇ ಮಂಡಳಿಯ ಕ್ರಿಯಾ ಯೋಜನೆಗೆ ಅನುಮೋದನೆ ನೀಡಲು ನಿರ್ಣಯಿಸಿದೆ. ಅಂತೆಯೇ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಯೋಇ 23 ಪಿಟಿಪಿ 2014, ಬೆಂಗಳೂರು, ದಿನಾಂಕ:22-09-2014.**

ಬಯಲುಸೀಮೆ ಪ್ರದೇಶಾಭಿವೃದ್ಧಿ ಮಂಡಳಿ, ಚಿತ್ರದುರ್ಗದ 2014-15ನೇ ಸಾಲಿನ ₹3982.66 ಲಕ್ಷಗಳ ಈ ಕೆಳಕಂಡ ವಾರ್ಷಿಕ ಕ್ರಿಯಾ ಯೋಜನೆಗೆ ಮಂಡಳಿಯಲ್ಲಿ ಕೈಗೊಳ್ಳುವ ಎಲ್ಲಾ ಹೊಸ ಕಾಮಗಾರಿಗಳ ಕ್ರಿಯಾ ಯೋಜನೆ ಪಟ್ಟಿಯನ್ನು ಕೂಡಲೇ ಸಲ್ಲಿಸುವ ಷರತ್ತಿಗೊಳಪಟ್ಟು ಅನುಮೋದನೆ ನೀಡಿದೆ.

| ಕ್ರ. ಸಂ. | ವಿವರಗಳು | ಮೊತ್ತ ( ₹ ಲಕ್ಷಗಳಲ್ಲಿ) |
|---|---|---|
| (ಅ) | **ಸಹಾಯಾನುದಾನ** | |
| | 1. ಆಡಳಿತಾತ್ಮಕ ವೆಚ್ಚಕ್ಕಾಗಿ | 211.64 |
| | 2. ಮುಂದುವರಿದ ಕಾಮಗಾರಿಗಳಿಗಾಗಿ | 20.00 |
| | ಒಟ್ಟು (ಅ) | 231.64 |
| (ಆ) | **ಬಂಡವಾಳ ವೆಚ್ಚ** | |
| | 1. ಮಂಡಳಿಯ ಮುಂದುವರಿದ ಕಾಮಗಾರಿಗಳಿಗೆ | 608.08 |
| | 2. ಮಂಡಳಿಯ ಹೊಸ ಕಾಮಗಾರಿಗಳಿಗೆ | 1637.86 |
| | 3. ಸರ್ಕಾರದ ವಿವೇಚನಾ ನಿಧಿ | 93.00 |
| | 4. ಅಧ್ಯಕ್ಷರ ವಿವೇಚನಾ ನಿಧಿ | 93.00 |
| | 5. ಮಂಡಳಿಯ ಅಧಿಕಾರಿಗಳ ವಿವೇಚನಾ ನಿಧಿ | 46.50 |
| | **ಒಟ್ಟು (ಆ)** | 2478.44 |
| (ಇ) | **ವಿಶೇಷ ಘಟಕ ಯೋಜನೆ** | |
| | 1. ವಿಶೇಷ ಘಟಕ ಯೋಜನೆ ಮುಂದುವರಿದ ಕಾಮಗಾರಿಗಳಿಗೆ | 468.11 |
| | 2. ವಿಶೇಷ ಘಟಕ ಯೋಜನೆ ಹೊಸ ಕಾಮಗಾರಿಗಳಿಗೆ | 367.35 |
| | 3. ವಿಶೇಷ ಘಟಕ ಯೋಜನೆ ಸರ್ಕಾರದ ವಿವೇಚನಾ ನಿಧಿ | 21.00 |
| | 4. ವಿಶೇಷ ಘಟಕ ಯೋಜನೆ ಅಧ್ಯಕ್ಷರ ವಿವೇಚನಾ ನಿಧಿ | 21.00 |
| | 5. ಮಂಡಳಿಯ ಅಧಿಕಾರಿಗಳ ವಿವೇಚನಾ ನಿಧಿ | 10.50 |
| | **ಒಟ್ಟು (ಇ)** | 887.96 |
| (ಈ) | **ಗಿರಿಜನ ಉಪಯೋಜನೆ** | |
| | 1. ಗಿರಿಜನ ಉಪಯೋಜನೆ ಮುಂದುವರಿದ ಕಾಮಗಾರಿಗಳಿಗೆ | 142.13 |
| | 2.ಗಿರಿಜನ ಉಪಯೋಜನೆ ಹೊಸ ಕಾಮಗಾರಿಗಳಿಗೆ | 165.13 |
| | 3.ಗಿರಿಜನ ಉಪಯೋಜನೆ ಸರ್ಕಾರದ ವಿವೇಚನಾ ನಿಧಿ | 9.00 |
| | 4.ಗಿರಿಜನ ಉಪಯೋಜನೆ ಅಧ್ಯಕ್ಷರ ವಿವೇಚನಾ ನಿಧಿ | 9.00 |
| | 5.ಮಂಡಳಿಯ ಅಧಿಕಾರಿಗಳ ವಿವೇಚನಾ ನಿಧಿ | 4.50 |
| | **ಒಟ್ಟು (ಈ)** | 329.76 |
| (ಉ) | **ನಬಾರ್ಡ್** | |
| | 1.ನಬಾರ್ಡ್ ಮುಂದುವರಿದ ಕಾಮಗಾರಿಗಳಿಗೆ | 54.86 |
| | 2.ನಬಾರ್ಡ್ ಹೊಸ ಕಾಮಗಾರಿಗಳಿಗೆ | 0.00 |
| | **ಒಟ್ಟು (ಉ)** | 54.86 |
| | **ಒಟ್ಟು (ಅ+ಆ+ಇ+ಈ+ಉ)** | **3982.66** |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಲ್.ಸಿ.ಬಸವರಾಜು,**

ಸರ್ಕಾರದ ಅಧೀನ ಕಾರ್ಯದರ್ಶಿ(ಎಸ್-5),

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

**P.R. 856**

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆಯಡಿ ವಿವಿಧ ಅಧ್ಯಯನಗಳನ್ನು ಕೈಗೊಳ್ಳಲಿಚ್ಛಿಸುವ ಖ್ಯಾತ ಸಂಶೋಧನಾ ಸಂಸ್ಥೆಗಳು/ ವಿಶ್ವವಿದ್ಯಾನಿಲಯಗಳು/ ಸಲಹಾ ಸಂಸ್ಥೆಗಳನ್ನು ಆಯ್ಕೆ ಮಾಡಲು ಮೌಲ್ಯಮಾಪನ ಸಮಿತಿ (Evaluation Committee) ರಚಿಸುವ ಬಗ್ಗೆ.

**ಪ್ರಸ್ತಾವನೆ:**

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆಯು ಖ್ಯಾತ ಸಂಶೋಧನಾ ಸಂಸ್ಥೆಗಳು/ ವಿಶ್ವವಿದ್ಯಾನಿಲಯಗಳು/ ಸಲಹಾ ಸಂಸ್ಥೆಗಳಿಂದ ವಿವಿಧ-ಅಧ್ಯಯನಗಳನ್ನು ಕೈಗೊಳ್ಳಲು ಆಹ್ವಾನಗಳನ್ನು ನೀಡಿದ್ದು, ಈ ಸಂಬಂಧ ಅಧ್ಯಯನ ಕೈಗೊಳ್ಳಲಿಚ್ಛಿಸುವ ಸಂಸ್ಥೆಗಳನ್ನು ಆಯ್ಕೆ ಮಾಡಲು ಮೌಲ್ಯಮಾಪನ ಸಮಿತಿಯನ್ನು ರಚಿಸಲು ಉದ್ದೇಶಿಸಲಾಗಿದೆ. ಮುಖ್ಯ ಮೌಲ್ಯಮಾಪನ ಅಧಿಕಾರಿ, ಕರ್ನಾಟಕ ಮೌಲ್ಯಮಾಪನ ಪ್ರಾಧಿಕಾರ (KEA) ಇವರನ್ನು ಅಧ್ಯಕ್ಷರನ್ನಾಗಿ, ನಿರ್ದೇಶಕರು, ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ (DES), ಮತ್ತು ನಿರ್ದೇಶಕರು, ಮಾನವ ಅಭಿವೃದ್ಧಿ ವಿಭಾಗ, ಯೋಜನಾ ಇಲಾಖೆ ಇವರುಗಳನ್ನು ಸದಸ್ಯರನ್ನಾಗಿ ಈ ಸಮಿತಿಗೆ ನೇಮಿಸಲು ಪ್ರಸ್ತಾಪಿಸಲಾಗಿದೆ. ಅದರಂತೆ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಪಿಡಿ 74 ಪಿಎಸ್‌ಡಿ 2014, ಬೆಂಗಳೂರು, ದಿನಾಂಕ: 16ನೇ ಸೆಪ್ಟೆಂಬರ್ 2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆಯಡಿ ವಿವಿಧ ಅಧ್ಯಯನಗಳನ್ನು ಕೈಗೊಳ್ಳಲಿಚ್ಛಿಸುವ ಖ್ಯಾತ ಸಂಶೋಧನಾ ಸಂಸ್ಥೆಗಳು/ ವಿಶ್ವವಿದ್ಯಾನಿಲಯಗಳು/ ಸಲಹಾ ಸಂಸ್ಥೆಗಳನ್ನು ಆಯ್ಕೆ ಮಾಡಲು ಈ ಕೆಳಕಂಡಂತೆ ಮೌಲ್ಯಮಾಪನ ಸಮಿತಿ (Evaluation Committee) ಯನ್ನು ರಚಿಸಿ, ಆದೇಶಿಸಲಾಗಿದೆ.

**ಮೌಲ್ಯಮಾಪನ ಸಮಿತಿ (Evaluation Committee)**

| | | |
|---|---|---|
| 1 | ಮುಖ್ಯ ಮೌಲ್ಯಮಾಪನ ಅಧಿಕಾರಿ,<br>ಕರ್ನಾಟಕ ಮೌಲ್ಯಮಾಪನ ಪ್ರಾಧಿಕಾರ | ಅಧ್ಯಕ್ಷರು |
| 2 | ನಿರ್ದೇಶಕರು,<br>ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ | ಸದಸ್ಯರು |
| 3 | ನಿರ್ದೇಶಕರು,<br>ಮಾನವ ಅಭಿವೃದ್ಧಿ ವಿಭಾಗ, ಯೋಜನಾ ಇಲಾಖೆ | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ರಫೀ ಅಹಮದ್ ಎಂ.ಎಸ್,**
ಸರ್ಕಾರದ ಅಧೀನ ಕಾರ್ಯದರ್ಶಿ-1&2,
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

P.R. 857

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ :** ನಿರ್ದಿಷ್ಟ ಗುರಿಯ ಸಾರ್ವಜನಿಕ ವಿತರಣಾ ಪದ್ಧತಿ(TPDS)ಯಡಿ ರಾಯಚೂರು ಜಿಲ್ಲೆಯಲ್ಲಿ ಜಿಲ್ಲಾ ಮಟ್ಟದ ಜಾಗೃತ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಆನಾಸ 144 ಡಿಆರ್‌ಎ 2013, ದಿನಾಂಕ: 26-10-2013.
2. ರಾಯಚೂರು ಜಿಲ್ಲಾ ಉಸ್ತುವಾರಿ ಸಚಿವರ ಪತ್ರ ಸಂಖ್ಯೆ: ವೈಶಿಸ:1416:2014-15, ದಿನಾಂಕ: 28-10-2014.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ 1ರ ದಿನಾಂಕ: 26-10-2013ರ ಆದೇಶದಲ್ಲಿ ನಿರ್ದಿಷ್ಟ ಗುರಿಯ ಸಾರ್ವಜನಿಕ ವಿತರಣಾ ಪದ್ಧತಿ(TPDS)ಯಡಿಯ ಕಾರ್ಯಚಟುವಟಿಕೆಗಳನ್ನು ನಿಯಮಿತವಾಗಿ ಪರಿಶೀಲಿಸಲು ಜಿಲ್ಲಾ ಮಟ್ಟದಲ್ಲಿ ಜಾಗೃತಿ ಸಮಿತಿಯನ್ನು ಪುನರ್ ರಚಿಸಲು ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ 2ರಲ್ಲಿ ರಾಯಚೂರು ಜಿಲ್ಲಾ ಉಸ್ತುವಾರಿ ಸಚಿವರು ಇವರು ರಾಯಚೂರು ಜಿಲ್ಲೆಯಲ್ಲಿ ಜಿಲ್ಲಾ ಮಟ್ಟದ ಜಾಗೃತಿ ಸಮಿತಿಯನ್ನು ರಚಿಸುವಂತೆ ಕೋರಿ ಸಮಿತಿಗೆ ಅರ್ಹ ಸದಸ್ಯರುಗಳನ್ನು ನಾಮನಿರ್ದೇಶನ ಮಾಡಿರುತ್ತಾರೆ.

ನಿರ್ದಿಷ್ಟ ಗುರಿಯ ಸಾರ್ವಜನಿಕ ವಿತರಣಾ ವ್ಯವಸ್ಥೆ ಹಾಗೂ ಸದರಿ ವ್ಯವಸ್ಥೆಯಡಿ ಜಾರಿಗೊಳಿಸಲಾಗಿರುವ "ಅನ್ನಭಾಗ್ಯ" ಯೋಜನೆಯ ಸಮರ್ಪಕ ಅನುಷ್ಠಾನ ಹಾಗೂ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ನ್ಯಾಯಬೆಲೆ ಅಂಗಡಿಗಳ ಸೂಕ್ತ ಮೇಲ್ವಿಚಾರಣೆಗಾಗಿ ಜಿಲ್ಲಾ ಮಟ್ಟದ ಜಾಗೃತಿ ಸಮಿತಿಯನ್ನು ಈ ಕೆಳಗಿನಂತೆ ಪುನರ್ ರಚಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಆನಾಸ 336 ಡಿಆರ್‌ಎ 2014, ಬೆಂಗಳೂರು, ದಿನಾಂಕ: 18ನೇ ನವೆಂಬರ್ 2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ರಾಯಚೂರು ಜಿಲ್ಲೆಯಲ್ಲಿ ಜಿಲ್ಲಾ ಮಟ್ಟದ ಜಾಗೃತ ಸಮಿತಿಯನ್ನು ಈ ಕೆಳಕಂಡಂತೆ ಪುನರ್ ರಚಿಸಿ ಆದೇಶಿಸಿದೆ.

1. ಜಿಲ್ಲಾ ಉಸ್ತುವಾರಿ ಸಚಿವರು – ಅಧ್ಯಕ್ಷರು
2. ಜಿಲ್ಲಾ ಪಂಚಾಯತ್ ಅಧ್ಯಕ್ಷರು – ಉಪಾಧ್ಯಕ್ಷರು
3. ಜಿಲ್ಲಾಧಿಕಾರಿಗಳು – ಸದಸ್ಯರು
4. ಪಂಚಾಯತ್ ಕಾರ್ಯನಿರ್ವಹಣಾಧಿಕಾರಿಗಳು – ಸದಸ್ಯರು

| | | |
|---|---|---|
| 5. | ಶ್ರೀ ಬಸವರಾಜ, ತಂದೆ ಚೆನ್ನಪ್ಪ ಕುರಕುಂದಿ, ಸಿಂಧನೂರು | – ಅಧಿಕಾರೇತರ ಸದಸ್ಯರು |
| 6. | ಶ್ರೀಮತಿ ನಿರ್ಮಲ ಬೆಣ್ಣೆಮಲ್ದಕಲ್, ದೇವದುರ್ಗ | – ಅಧಿಕಾರೇತರ ಸದಸ್ಯರು |
| 7. | ಶ್ರೀಮತಿ ವಿದ್ಯಾನಂದಿನಿ, ರಾಯಚೂರು | – ಅಧಿಕಾರೇತರ ಸದಸ್ಯರು |
| 8. | ಶ್ರೀ ನರಸಿಂಹಲು ಮಾಡಗಿರಿ, ರಾಯಚೂರು | – ಅಧಿಕಾರೇತರ ಸದಸ್ಯರು |
| 9. | ಶ್ರೀ ಶೇಷಗಿರಿರಾವ್ ಕವಿತಾಳ, ಮಾನ್ವಿ ತಾ॥ | – ಅಧಿಕಾರೇತರ ಸದಸ್ಯರು |
| 10. | ಉಪನಿರ್ದೇಶಕರು, ಆನಾಸ ಇಲಾಖೆ, ರಾಯಚೂರು | – ಸದಸ್ಯ ಕಾರ್ಯದರ್ಶಿ |

**ಜಾಗೃತಿ ಸಮಿತಿಯ ಕಾರ್ಯ ಚಟುವಟಿಕೆಗಳು:**

1. ಜಿಲ್ಲೆಯ ಎಲ್ಲಾ ನ್ಯಾಯಬೆಲೆ ಅಂಗಡಿಗಳ ಕಾರ್ಯನಿರ್ವಹಣೆಯ ಮೇಲುಸ್ತುವಾರಿ ಮಾಡುವುದು.
2. ಜಿಲ್ಲಾ ಮತ್ತು ತಾಲ್ಲೂಕು ಮಟ್ಟದಲ್ಲಿ ಸಗಟು ಮಳಿಗೆಗಳ offtake ಮೇಲುಸ್ತುವಾರಿ ಮಾಡುವುದು.
3. ಪಡಿತರ ಚೀಟಿ ಕೋರಿ ಸಲ್ಲಿಸಿರುವ ಹೊಸ ಅರ್ಜಿಗಳನ್ನು ಮತ್ತು ಅನುಮೋದಿತ/ತಿರಸ್ಕೃತ ಹಾಗೂ ಕೈಬಿಡಲಾಗಿರುವ ನಕಲಿ ಪಡಿತರ ಚೀಟಿಗಳನ್ನು ಮೇಲುಸ್ತುವಾರಿ ಮಾಡತಕ್ಕದ್ದು.
4. ರಾಜ್ಯದ ಅನ್ನಭಾಗ್ಯ ಯೋಜನೆಯನ್ನು ಬಲಪಡಿಸಲು ಹಾಗೂ ಸದರಿ ಯೋಜನೆಯ ಸಮರ್ಪಕ ಅನುಷ್ಠಾನಕ್ಕೆ ಸಲಹೆಗಳನ್ನು ನೀಡುವುದು.

**ಷರತ್ತುಗಳು**

ಅ) ಜಾಗೃತ ಸಮಿತಿಗಳು ಕನಿಷ್ಠ ತಿಂಗಳಿಗೆ ಒಮ್ಮೆಯಾದರೂ ಸಭೆ ಸೇರತಕ್ಕದ್ದು. ಯಾವುದೇ ಸರ್ಕಾರೇತರ ಸದಸ್ಯರು ಟಿ.ಎ/ಡಿ.ಎ ಪಡೆಯಲು ಅರ್ಹತೆ ಇರುವುದಿಲ್ಲ.

ಆ) ಜಿಲ್ಲಾ ಮಟ್ಟದ ಜಾಗೃತಿ ಸಮಿತಿಯ ಅಧಿಕಾರ ಅವಧಿಯು ರಚನೆಗೊಂಡ ದಿನಾಂಕದಿಂದ ಒಂದು ವರ್ಷ ಆಗಿರುತ್ತದೆ. (ಜಿಲ್ಲಾ ಉಸ್ತುವಾರಿ ಸಚಿವರು ಮತ್ತು ಜಿಲ್ಲಾ ಪಂಚಾಯತ್ ಅಧ್ಯಕ್ಷರನ್ನು ಹೊರತುಪಡಿಸಿ)

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ವಿ.ಪ್ರಭಾಕರ್**

ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ),
ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ
(ಆಹಾರ–1&2).

P.R: 858
S.C. 200

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** ನಿರ್ಧಿಷ್ಟ ಗುರಿಯ ಸಾರ್ವಜನಿಕ ವಿತರಣಾ ಪದ್ಧತಿ(TPDS)ಯಡಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಜಿಲ್ಲಾ ಮಟ್ಟದ ಜಾಗೃತ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಆನಾಸ 144 ಡಿಆರ್‌ಎ 2013, ದಿನಾಂಕ: 26–10–2013.
2. ಆಯುಕ್ತರು, ಆನಾಸ ಮತ್ತು ಗ್ರಾವ್ಯ ಇಲಾಖೆ, ಇವರ ಪತ್ರ ಸಂಖ್ಯೆ: ಸಿಎಫ್‌ಎಸ್/ಪಿಡಿ/ನ್ಯಾಬೆಅಂ/II/102/2012–13, ದಿನಾಂಕ: 10–10–2014.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ 1ರ ದಿನಾಂಕ: 26–10–2013ರ ಆದೇಶದಲ್ಲಿ ನಿರ್ಧಿಷ್ಟ ಗುರಿಯ ಸಾರ್ವಜನಿಕ ವಿತರಣಾ ಪದ್ಧತಿ(TPDS)ಯಡಿಯ ಕಾರ್ಯಚಟುವಟಿಕೆಗಳನ್ನು ನಿಯಮಿತವಾಗಿ ಪರಿಶೀಲಿಸಲು ಜಿಲ್ಲಾ ಮಟ್ಟದಲ್ಲಿ ಜಾಗೃತಿ ಸಮಿತಿಯನ್ನು ಪುನರ್ ರಚಿಸಲು ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ 2ರಲ್ಲಿ ಆಯುಕ್ತರು, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಇವರು ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಜಿಲ್ಲಾ ಮಟ್ಟದ ಜಾಗೃತಿ ಸಮಿತಿಯನ್ನು ರಚಿಸುವ ಬಗ್ಗೆ ಅರ್ಹ ಸದಸ್ಯರುಗಳ ನಾಮನಿರ್ದೇಶನ ಪಟ್ಟಿಯೊಂದಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ನಿರ್ಧಿಷ್ಟ ಗುರಿಯ ಸಾರ್ವಜನಿಕ ವಿತರಣಾ ವ್ಯವಸ್ಥೆ ಹಾಗೂ ಸದರಿ ವ್ಯವಸ್ಥೆಯಡಿ ಜಾರಿಗೊಳಿಸಲಾಗಿರುವ "ಅನ್ನಭಾಗ್ಯ" ಯೋಜನೆಯ ಸಮರ್ಪಕ ಅನುಷ್ಠಾನ ಹಾಗೂ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ನ್ಯಾಯಬೆಲೆ ಅಂಗಡಿಗಳ ಸೂಕ್ತ ಮೇಲ್ವಿಚಾರಣೆಗಾಗಿ ಜಿಲ್ಲಾ ಮಟ್ಟದ ಜಾಗೃತಿ ಸಮಿತಿಯನ್ನು ಈ ಕೆಳಗಿನಂತೆ ಪುನರ್ ರಚಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಆನಾಸ 350 ಡಿಆರ್‌ಎ 2014, ಬೆಂಗಳೂರು, ದಿನಾಂಕ: 18ನೇ ನವೆಂಬರ್ 2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಜಿಲ್ಲಾ ಮಟ್ಟದ ಜಾಗೃತಿ ಸಮಿತಿಯನ್ನು ಈ ಕೆಳಕಂಡಂತೆ ಪುನರ್ ರಚಿಸಿ ಆದೇಶಿಸಿದೆ.

| | | |
|---|---|---|
| 1. | ಜಿಲ್ಲಾ ಉಸ್ತುವಾರಿ ಸಚಿವರು | – ಅಧ್ಯಕ್ಷರು |
| 2. | ಜಿಲ್ಲಾ ಪಂಚಾಯತ್ ಅಧ್ಯಕ್ಷರು | – ಉಪಾಧ್ಯಕ್ಷರು |
| 3. | ಜಿಲ್ಲಾಧಿಕಾರಿಗಳು | – ಸದಸ್ಯರು |
| 4. | ಪಂಚಾಯತ್ ಕಾರ್ಯನಿರ್ವಹಣಾಧಿಕಾರಿಗಳು | – ಸದಸ್ಯರು |

5. ಶ್ರೀಮತಿ ರೇಣುಕಮ್ಮ ಕೋಂ ಕೆ.ಜಿ.ರಂಗಸ್ವಾಮಿ, ಕೆರೆಕತ್ತಿನೂರು, ಕುಲುವನಹಳ್ಳಿ ಅಂಚೆ, ಸೋಂಪುರ ಹೋಬಳಿ, ನೆಲಮಂಗಲ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ. – ಅಧಿಕಾರೇತರ ಸದಸ್ಯರು
6. ಶ್ರೀಮತಿ ಉಮಾ ಕೋಂ ಆನಂದಪ್ಪ ಮಾರ್ಕೆಟ್, ವಿಜಯಪುರ ಟೌನ್, ದೇವನಹಳ್ಳಿ ತಾಲ್ಲೂಕು – ಅಧಿಕಾರೇತರ ಸದಸ್ಯರು
7. ಶ್ರೀ ನಂಜೇಗೌಡ ಬಿನ್ ಅಶ್ವಥ್ ನಾರಾಯಣ್ ಗೌಡ, ಚೆನ್ನರಾಯಪಟ್ಟಣ ಅಂಚೆ, ದೇವನಹಳ್ಳಿ ತಾಲ್ಲೂಕು – ಅಧಿಕಾರೇತರ ಸದಸ್ಯರು
8. ಶ್ರೀ ಎನ್.ಸೋಮಶೇಕರ್ ಬಿನ್ ನಾರಾಯಣಪ್ಪ, ಮರಳುಬಾಗಿಲು, ದೇವನಹಳ್ಳಿ ಟೌನ್, ಬೆಂಗಳೂರು ಗ್ರಾಮಾಂತರ ಜಿಲ್ಲೆ. – ಅಧಿಕಾರೇತರ ಸದಸ್ಯರು
9. ಶ್ರೀ ಅಪ್ಪಾಜಿ (ಅಂಜನಾ ಮೂರ್ತಿ) ಬಿನ್ ಹನುಮಯ್ಯ ಗ್ರಾಮಪಂಚಾಯ್ತಿ ಸದಸ್ಯರು, ಕರಿಮಾರನಹಳ್ಳಿ, ಹುಲಿಕುಂಟೆ ಅಂಚೆ, ತ್ಯಾಮಗೊಂಡ್ಲು ಹೋಬಳಿ, ನೆಲಮಂಗಲ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ – ಅಧಿಕಾರೇತರ ಸದಸ್ಯರು
10. ಉಪನಿರ್ದೇಶಕರು, ಆನಾಸ ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ – ಸದಸ್ಯ ಕಾರ್ಯದರ್ಶಿ

**ಜಾಗೃತಿ ಸಮಿತಿಯ ಕಾರ್ಯ ಚಟುವಟಿಕೆಗಳು:**

1. ಜಿಲ್ಲೆಯ ಎಲ್ಲಾ ನ್ಯಾಯಬೆಲೆ ಅಂಗಡಿಗಳ ಕಾರ್ಯನಿರ್ವಹಣೆಯ ಮೇಲುಸ್ತುವಾರಿ ಮಾಡುವುದು.
2. ಜಿಲ್ಲಾ ಮತ್ತು ತಾಲ್ಲೂಕು ಮಟ್ಟದಲ್ಲಿ ಸಗಟು ಮಳಿಗೆಗಳ offtake ಮೇಲುಸ್ತುವಾರಿ ಮಾಡುವುದು.
3. ಪಡಿತರ ಚೀಟಿ ಕೋರಿ ಸಲ್ಲಿಸಿರುವ ಹೊಸ ಅರ್ಜಿಗಳನ್ನು ಮತ್ತು ಅನುಮೋದಿತ/ತಿರಸ್ಕೃತ ಹಾಗೂ ಕೈಬಿಡಲಾಗಿರುವ ನಕಲಿ ಪಡಿತರ ಚೀಟಿಗಳನ್ನು ಮೇಲುಸ್ತುವಾರಿ ಮಾಡತಕ್ಕದ್ದು.
4. ರಾಜ್ಯದ ಅನ್ನಭಾಗ್ಯ ಯೋಜನೆಯನ್ನು ಬಲಪಡಿಸಲು ಹಾಗೂ ಸದರಿ ಯೋಜನೆಯ ಸಮರ್ಪಕ ಅನುಷ್ಠಾನಕ್ಕೆ ಸಲಹೆಗಳನ್ನು ನೀಡುವುದು.

**ಷರತ್ತುಗಳು**

ಅ) ಜಾಗೃತ ಸಮಿತಿಗಳು ಕನಿಷ್ಠ ತಿಂಗಳಿಗೆ ಒಮ್ಮೆಯಾದರೂ ಸಭೆ ಸೇರತಕ್ಕದ್ದು. ಯಾವುದೇ ಸರ್ಕಾರೇತರ ಸದಸ್ಯರು ಟಿ.ಎ/ಡಿ.ಎ ಪಡೆಯಲು ಅರ್ಹತೆ ಇರುವುದಿಲ್ಲ.

ಆ) ಜಿಲ್ಲಾ ಮಟ್ಟದ ಜಾಗೃತಿ ಸಮಿತಿಯ ಅಧಿಕಾರ ಅವಧಿಯು ರಚನೆಗೊಂಡ ದಿನಾಂಕದಿಂದ ಒಂದು ವರ್ಷ ಆಗಿರುತ್ತದೆ. (ಜಿಲ್ಲಾ ಉಸ್ತುವಾರಿ ಸಚಿವರು ಮತ್ತು ಜಿಲ್ಲಾ ಪಂಚಾಯತ್ ಅಧ್ಯಕ್ಷರನ್ನು ಹೊರತುಪಡಿಸಿ)

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ವಿ.ಪ್ರಭಾಕರ್**

ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ),

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ

(ಆಹಾರ–1&2).

**P.R: 859**

**S.C. 200**

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** ನಿರ್ಧಿಷ್ಟ ಗುರಿಯ ಸಾರ್ವಜನಿಕ ವಿತರಣಾ ಪದ್ಧತಿ(TPDS)ಯಡಿ ಶಿವಮೊಗ್ಗ ಜಿಲ್ಲೆಯಲ್ಲಿ ಜಿಲ್ಲಾ ಮಟ್ಟದ ಜಾಗೃತ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಆನಾಸ 144 ಡಿಆರ್ಎ 2013, ದಿನಾಂಕ: 26–10–2013.
2. ಆಯುಕ್ತರು, ಆನಾಸ ಮತ್ತು ಗ್ರಾವ್ಯ ಇಲಾಖೆ, ಇವರ ಪತ್ರ ಸಂಖ್ಯೆ: ಸಿಎಫ್ಎಸ್/ಪಿಡಿ/ನ್ಯಾಬೆಅಂ/II/102/2012–13, ದಿನಾಂಕ: 10–10–2014.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ 1ರ ದಿನಾಂಕ: 26–10–2013ರ ಆದೇಶದಲ್ಲಿ ನಿರ್ಧಿಷ್ಟ ಗುರಿಯ ಸಾರ್ವಜನಿಕ ವಿತರಣಾ ಪದ್ಧತಿ(TPDS)ಯಡಿಯ ಕಾರ್ಯಚಟುವಟಿಕೆಗಳನ್ನು ನಿಯಮಿತವಾಗಿ ಪರಿಶೀಲಿಸಲು ಜಿಲ್ಲಾ ಮಟ್ಟದಲ್ಲಿ ಜಾಗೃತಿ ಸಮಿತಿಯನ್ನು ಪುನರ್ ರಚಿಸಲು ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ 2ರಲ್ಲಿ ಆಯುಕ್ತರು, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಇವರು ಶಿವಮೊಗ್ಗ ಜಿಲ್ಲೆಯಲ್ಲಿ ಜಿಲ್ಲಾ ಮಟ್ಟದ ಜಾಗೃತಿ ಸಮಿತಿಯನ್ನು ರಚಿಸುವ ಬಗ್ಗೆ ಅರ್ಹ ಸದಸ್ಯರುಗಳ ನಾಮನಿರ್ದೇಶನ ಪಟ್ಟಿಯೊಂದಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ನಿರ್ದಿಷ್ಟ ಗುರಿಯ ಸಾರ್ವಜನಿಕ ವಿತರಣಾ ವ್ಯವಸ್ಥೆ ಹಾಗೂ ಸದರಿ ವ್ಯವಸ್ಥೆಯಡಿ ಜಾರಿಗೊಳಿಸಲಾಗಿರುವ "ಅನ್ನಭಾಗ್ಯ" ಯೋಜನೆಯ ಸಮರ್ಪಕ ಅನುಷ್ಠಾನ ಹಾಗೂ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ನ್ಯಾಯಬೆಲೆ ಅಂಗಡಿಗಳ ಸೂಕ್ತ ಮೇಲ್ವಿಚಾರಣೆಗಾಗಿ ಜಿಲ್ಲಾ ಮಟ್ಟದ ಜಾಗೃತಿ ಸಮಿತಿಯನ್ನು ಈ ಕೆಳಗಿನಂತೆ ಪುನರ್ ರಚಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಆನಾಸ 385 ಡಿಆರ್ಎ 2014, ಬೆಂಗಳೂರು, ದಿನಾಂಕ: 18ನೇ ನವೆಂಬರ್ 2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶಿವಮೊಗ್ಗ ಜಿಲ್ಲೆಯಲ್ಲಿ ಜಿಲ್ಲಾ ಮಟ್ಟದ ಜಾಗೃತ ಸಮಿತಿಯನ್ನು ಈ ಕೆಳಕಂಡಂತೆ ಪುನರ್ ರಚಿಸಿ ಆದೇಶಿಸಿದೆ.

| | | |
|---|---|---|
| 1. | ಜಿಲ್ಲಾ ಉಸ್ತುವಾರಿ ಸಚಿವರು | – ಅಧ್ಯಕ್ಷರು |
| 2. | ಜಿಲ್ಲಾ ಪಂಚಾಯತ್ ಅಧ್ಯಕ್ಷರು | – ಉಪಾಧ್ಯಕ್ಷರು |
| 3. | ಜಿಲ್ಲಾಧಿಕಾರಿಗಳು | – ಸದಸ್ಯರು |
| 4. | ಪಂಚಾಯತ್ ಕಾರ್ಯನಿರ್ವಹಣಾಧಿಕಾರಿಗಳು | – ಸದಸ್ಯರು |
| 5. | ಶ್ರೀಮತಿ ಮಾಲಾಶ್ರೀ.ಬಿ.ಕುಮಾರ ತೇಜ ನಿಲಯ, ಕೆ.ಎಂ.ರೋಡ್, ಶಿವಮೊಗ್ಗ | – ಅಧಿಕಾರೇತರ ಸದಸ್ಯರು |
| 6. | ಶ್ರೀಮತಿ ಆರ್.ಮಮತಾ ಸಿಂಗ್, ಕೋಂ ಪ್ರತಾಪ್ ಸಿಂಗ್, ಬೊಮ್ಮನಕಟ್ಟೆ, ಆಶ್ರಯ ಬಡಾವಣೆ, ಶಿವಮೊಗ್ಗ | – ಅಧಿಕಾರೇತರ ಸದಸ್ಯರು |
| 7. | ಶ್ರೀ ಬಿ.ಎಲ್.ಕೃಷ್ಣಮೂರ್ತಿ, ಬಿ.ಎಲ್.ಲಕ್ಕಪ್ಪ, ಅರ್ಚನ ನಿಲಯ, ಎಂ.ಐ.ಜಿ –385 ಶಿವಮೊಗ್ಗ | – ಅಧಿಕಾರೇತರ ಸದಸ್ಯರು |
| 8. | ಶ್ರೀ ಎಸ್.ಜಿ.ಪ್ರಭಾಕರ ಗೌಡ ಬಿನ್ ಗೋವಿಂದಪ್ಪ, ಸಂತೆಕಡೂರು, ಶಿವಮೊಗ್ಗ | – ಅಧಿಕಾರೇತರ ಸದಸ್ಯರು |
| 9. | ಶ್ರೀ ರಮೇಶ್ ಜೈ ಸಿಂಗ್, ಆದಾಯ ತೆರಿಗೆ ಕಛೇರಿ ಎದುರು ಗೋಪಾಲಗೌಡ ಬಡಾವಣೆ, ಶಿವಮೊಗ್ಗ | – ಅಧಿಕಾರೇತರ ಸದಸ್ಯರು |
| 10. | ಉಪನಿರ್ದೇಶಕರು, ಆನಾಸ ಇಲಾಖೆ, ಶಿವಮೊಗ್ಗ | – ಸದಸ್ಯ ಕಾರ್ಯದರ್ಶಿ |

**ಜಾಗೃತಿ ಸಮಿತಿಯ ಕಾರ್ಯ ಚಟುವಟಿಕೆಗಳು:**

1. ಜಿಲ್ಲೆಯ ಎಲ್ಲಾ ನ್ಯಾಯಬೆಲೆ ಅಂಗಡಿಗಳ ಕಾರ್ಯನಿರ್ವಹಣೆಯ ಮೇಲುಸ್ತುವಾರಿ ಮಾಡುವುದು.
2. ಜಿಲ್ಲಾ ಮತ್ತು ತಾಲ್ಲೂಕು ಮಟ್ಟದಲ್ಲಿ ಸಗಟು ಮಳಿಗೆಗಳ offtake ಮೇಲುಸ್ತುವಾರಿ ಮಾಡುವುದು.
3. ಪಡಿತರ ಚೀಟಿ ಕೋರಿ ಸಲ್ಲಿಸಿರುವ ಹೊಸ ಅರ್ಜಿಗಳನ್ನು ಮತ್ತು ಅನುಮೋದಿತ/ತಿರಸ್ಕೃತ ಹಾಗೂ ಕೈಬಿಡಲಾಗಿರುವ ನಕಲಿ ಪಡಿತರ ಚೀಟಿಗಳನ್ನು ಮೇಲುಸ್ತುವಾರಿ ಮಾಡತಕ್ಕದ್ದು.
4. ರಾಜ್ಯದ ಅನ್ನಭಾಗ್ಯ ಯೋಜನೆಯನ್ನು ಬಲಪಡಿಸಲು ಹಾಗೂ ಸದರಿ ಯೋಜನೆಯ ಸಮರ್ಪಕ ಅನುಷ್ಠಾನಕ್ಕೆ ಸಲಹೆಗಳನ್ನು ನೀಡುವುದು.

**ಷರತ್ತುಗಳು**

ಅ) ಜಾಗೃತ ಸಮಿತಿಗಳು ಕನಿಷ್ಠ ತಿಂಗಳಿಗೆ ಒಮ್ಮೆಯಾದರೂ ಸಭೆ ಸೇರತಕ್ಕದ್ದು. ಯಾವುದೇ ಸರ್ಕಾರೇತರ ಸದಸ್ಯರು ಟಿ.ಎ/ಡಿ.ಎ ಪಡೆಯಲು ಅರ್ಹತೆ ಇರುವುದಿಲ್ಲ.

ಆ) ಜಿಲ್ಲಾ ಮಟ್ಟದ ಜಾಗೃತಿ ಸಮಿತಿಯ ಅಧಿಕಾರ ಅವಧಿಯು ರಚನೆಗೊಂಡ ದಿನಾಂಕದಿಂದ ಒಂದು ವರ್ಷ ಆಗಿರುತ್ತದೆ. (ಜಿಲ್ಲಾ ಉಸ್ತುವಾರಿ ಸಚಿವರು ಮತ್ತು ಜಿಲ್ಲಾ ಪಂಚಾಯತ್ ಅಧ್ಯಕ್ಷರನ್ನು ಹೊರತುಪಡಿಸಿ)

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ವಿ.ಪ್ರಭಾಕರ್**

ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ),

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ

(ಆಹಾರ–1&2).

**P.R: 860**

**S.C. 200**

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** ನಿರ್ದಿಷ್ಟ ಗುರಿಯ ಸಾರ್ವಜನಿಕ ವಿತರಣಾ ಪದ್ಧತಿ(TPDS)ಯಡಿ ಉತ್ತರ ಕನ್ನಡ ಜಿಲ್ಲೆಯಲ್ಲಿ ಜಿಲ್ಲಾ ಮಟ್ಟದ ಜಾಗೃತ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಆನಾಸ 144 ಡಿಆರ್ಎ 2013, ದಿನಾಂಕ: 26–10–2013.

2. ಆಯುಕ್ತರು, ಆನಾಸ ಮತ್ತು ಗ್ರಾಹ್ಯ ಇಲಾಖೆ, ಇವರ ಪತ್ರ ಸಂಖ್ಯೆ: ಸಿಎಫ್ಎಸ್/ಪಿಡಿ/ನ್ಯಾಬೆಅಂ/ II/102/2012–13, ದಿನಾಂಕ: 10–10–2014.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ 1ರ ದಿನಾಂಕ: 26-10-2013ರ ಆದೇಶದಲ್ಲಿ ನಿರ್ಧಿಷ್ಟ ಗುರಿಯ ಸಾರ್ವಜನಿಕ ವಿತರಣಾ ಪದ್ಧತಿ(TPDS)ಯಡಿಯ ಕಾರ್ಯಚಟುವಟಿಕೆಗಳನ್ನು ನಿಯಮಿತವಾಗಿ ಪರಿಶೀಲಿಸಲು ಜಿಲ್ಲಾ ಮಟ್ಟದಲ್ಲಿ ಜಾಗೃತಿ ಸಮಿತಿಯನ್ನು ಪುನರ್ ರಚಿಸಲು ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ 2ರಲ್ಲಿ ಆಯುಕ್ತರು, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಇವರು ಉತ್ತರ ಕನ್ನಡ ಜಿಲ್ಲೆಯಲ್ಲಿ ಜಿಲ್ಲಾ ಮಟ್ಟದ ಜಾಗೃತಿ ಸಮಿತಿಯನ್ನು ರಚಿಸುವ ಬಗ್ಗೆ ಅರ್ಹ ಸದಸ್ಯರುಗಳನ್ನು ನಾಮನಿರ್ದೇಶನ ಪಟ್ಟಿಯೊಂದಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ನಿರ್ಧಿಷ್ಟ ಗುರಿಯ ಸಾರ್ವಜನಿಕ ವಿತರಣಾ ವ್ಯವಸ್ಥೆ ಹಾಗೂ ಸದರಿ ವ್ಯವಸ್ಥೆಯಡಿ ಜಾರಿಗೊಳಿಸಲಾಗಿರುವ "ಅನ್ನಭಾಗ್ಯ" ಯೋಜನೆಯ ಸಮರ್ಪಕ ಅನುಷ್ಠಾನ ಹಾಗೂ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ನ್ಯಾಯಬೆಲೆ ಅಂಗಡಿಗಳ ಸೂಕ್ತ ಮೇಲ್ವಿಚಾರಣೆಗಾಗಿ ಜಿಲ್ಲಾ ಮಟ್ಟದ ಜಾಗೃತಿ ಸಮಿತಿಯನ್ನು ಈ ಕೆಳಗಿನಂತೆ ಪುನರ್ ರಚಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಆನಾಸ 386 ಡಿಆರ್ಎ 2014, ಬೆಂಗಳೂರು, ದಿನಾಂಕ: 18ನೇ ನವೆಂಬರ್ 2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಉತ್ತರ ಕನ್ನಡ ಜಿಲ್ಲೆಯಲ್ಲಿ ಜಿಲ್ಲಾ ಮಟ್ಟದ ಜಾಗೃತ ಸಮಿತಿಯನ್ನು ಈ ಕೆಳಕಂಡಂತೆ ಪುನರ್ ರಚಿಸಿ ಆದೇಶಿಸಿದೆ.

| | | |
|---|---|---|
| 1. | ಜಿಲ್ಲಾ ಉಸ್ತುವಾರಿ ಸಚಿವರು | – ಅಧ್ಯಕ್ಷರು |
| 2. | ಜಿಲ್ಲಾ ಪಂಚಾಯತ್ ಅಧ್ಯಕ್ಷರು | – ಉಪಾಧ್ಯಕ್ಷರು |
| 3. | ಜಿಲ್ಲಾಧಿಕಾರಿಗಳು | – ಸದಸ್ಯರು |
| 4. | ಪಂಚಾಯತ್ ಕಾರ್ಯನಿರ್ವಹಣಾಧಿಕಾರಿಗಳು | – ಸದಸ್ಯರು |
| 5. | ಶ್ರೀಮತಿ ಮಂಜಮ್ಮ ಎಂ.ಗೊಂಡ ಓಣಿ ಬಾಗಿಲು ಗ್ರಾಮ, ಹಡುವಳ್ಳಿ ಪೋಸ್ಟ್, ಭಟ್ಕಳ ತಾಲ್ಲೂಕು | – ಅಧಿಕಾರೇತರ ಸದಸ್ಯರು |
| 6. | ಶ್ರೀಮತಿ ವರದಾ ರಾಮಕೃಷ್ಣ ಹೆಗಡೆ ಸಾ:ಉಮ್ಮಚಗಿ, ಯಲ್ಲಾಪುರ ತಾಲ್ಲೂಕು | – ಅಧಿಕಾರೇತರ ಸದಸ್ಯರು |
| 7. | ಶ್ರೀ ರವೀಂದ್ರ ಪೇಟು ನಾಯ್ಕ, ಮೈಥಿಲಿ, 14ನೇ ಬ್ಲಾಕ್, ಡಬಲ್ ಬಿಲ್ಡಿಂಗ್ ಹಿಂದುಗಡೆ (24) ಅಜಾದ ನಗರ, ದಾಂಡೇಲಿ | – ಅಧಿಕಾರೇತರ ಸದಸ್ಯರು |
| 8. | ಶ್ರೀ ಪಿ.ಎಂ.ತಾಂಡೇಲ್, ನಂ.759, ಸರಕಾರಿ ಕಲಾ ಮತ್ತು ವಿಜ್ಞಾನ ಕಾಲೇಜು ಎದುರುಗಡೆ, ಕಾಜೂಬಾಗ, ಕಾರವಾರ | – ಅಧಿಕಾರೇತರ ಸದಸ್ಯರು |
| 9. | ಶ್ರೀ ಅಬ್ಬಾಸ ತೋನ್ಸೇ, ತೋನ್ಸೇ ಮಂಜಿಲ್, ಇಂದಿರಾ ನಗರ, ಹುಬ್ಬಳ್ಳಿ ರಸ್ತೆ, ಶಿರಸಿ. | – ಅಧಿಕಾರೇತರ ಸದಸ್ಯರು |
| 10. | ಉಪನಿರ್ದೇಶಕರು, ಆನಾಸ ಇಲಾಖೆ, ಉತ್ತರ ಕನ್ನಡ ಜಿಲ್ಲೆ | – ಸದಸ್ಯ ಕಾರ್ಯದರ್ಶಿ |

**ಜಾಗೃತಿ ಸಮಿತಿಯ ಕಾರ್ಯ ಚಟುವಟಿಕೆಗಳು:**

1. ಜಿಲ್ಲೆಯ ಎಲ್ಲಾ ನ್ಯಾಯಬೆಲೆ ಅಂಗಡಿಗಳ ಕಾರ್ಯನಿರ್ವಹಣೆಯ ಮೇಲುಸ್ತುವಾರಿ ಮಾಡುವುದು.
2. ಜಿಲ್ಲಾ ಮತ್ತು ತಾಲ್ಲೂಕು ಮಟ್ಟದಲ್ಲಿ ಸಗಟು ಮಳಿಗೆಗಳ offtake ಮೇಲುಸ್ತುವಾರಿ ಮಾಡುವುದು.
3. ಪಡಿತರ ಚೀಟಿ ಕೋರಿ ಸಲ್ಲಿಸಿರುವ ಹೊಸ ಅರ್ಜಿಗಳನ್ನು ಮತ್ತು ಅನುಮೋದಿತ/ತಿರಸ್ಕೃತ ಹಾಗೂ ಕೈಬಿಡಲಾಗಿರುವ ನಕಲಿ ಪಡಿತರ ಚೀಟಿಗಳನ್ನು ಮೇಲುಸ್ತುವಾರಿ ಮಾಡತಕ್ಕದ್ದು.
4. ರಾಜ್ಯದ ಅನ್ನಭಾಗ್ಯ ಯೋಜನೆಯನ್ನು ಬಲಪಡಿಸಲು ಹಾಗೂ ಸದರಿ ಯೋಜನೆಯ ಸಮರ್ಪಕ ಅನುಷ್ಠಾನಕ್ಕೆ ಸಲಹೆಗಳನ್ನು ನೀಡುವುದು.

**ಷರತ್ತುಗಳು**

ಅ) ಜಾಗೃತ ಸಮಿತಿಗಳು ಕನಿಷ್ಠ ತಿಂಗಳಿಗೆ ಒಮ್ಮೆಯಾದರೂ ಸಭೆ ಸೇರತಕ್ಕದ್ದು. ಯಾವುದೇ ಸರ್ಕಾರೇತರ ಸದಸ್ಯರು ಟಿ.ಎ/ಡಿ.ಎ ಪಡೆಯಲು ಅರ್ಹತೆ ಇರುವುದಿಲ್ಲ.

ಆ) ಜಿಲ್ಲಾ ಮಟ್ಟದ ಜಾಗೃತಿ ಸಮಿತಿಯ ಅಧಿಕಾರ ಅವಧಿಯು ರಚನೆಗೊಂಡ ದಿನಾಂಕದಿಂದ ಒಂದು ವರ್ಷ ಆಗಿರುತ್ತದೆ. (ಜಿಲ್ಲಾ ಉಸ್ತುವಾರಿ ಸಚಿವರು ಮತ್ತು ಜಿಲ್ಲಾ ಪಂಚಾಯತ್ ಅಧ್ಯಕ್ಷರನ್ನು ಹೊರತುಪಡಿಸಿ)

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ವಿ.ಪ್ರಭಾಕರ್**

ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ),

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ

(ಆಹಾರ-1&2).

**P.R: 861**

**S.C. 200**

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** ನಿರ್ಧಿಷ್ಟ ಗುರಿಯ ಸಾರ್ವಜನಿಕ ವಿತರಣಾ ಪದ್ಧತಿ(TPDS)ಯಡಿ ಬಾಗಲಕೋಟೆ ಜಿಲ್ಲೆಯಲ್ಲಿ ಜಿಲ್ಲಾ ಮಟ್ಟದ ಜಾಗೃತ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಆನಾಸ 144 ಡಿಆರ್‌ಎ 2013, ದಿನಾಂಕ: 26-10-2013.
2. ಆಯುಕ್ತರು, ಆನಾಸ ಮತ್ತು ಗ್ರಾವ್ಯ ಇಲಾಖೆ, ಇವರ ಪತ್ರ ಸಂಖ್ಯೆ: ಸಿಎಫ್‌ಎಸ್/ಪಿಡಿ/ನ್ಯಾಬೆಅಂ/ II/102/2012-13, ದಿನಾಂಕ: 10-10-2014.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ 1ರ ದಿನಾಂಕ: 26-10-2013ರ ಆದೇಶದಲ್ಲಿ ನಿರ್ಧಿಷ್ಟ ಗುರಿಯ ಸಾರ್ವಜನಿಕ ವಿತರಣಾ ಪದ್ಧತಿ(TPDS)ಯಡಿಯ ಕಾರ್ಯಚಟುವಟಿಕೆಗಳನ್ನು ನಿಯಮಿತವಾಗಿ ಪರಿಶೀಲಿಸಲು ಜಿಲ್ಲಾ ಮಟ್ಟದಲ್ಲಿ ಜಾಗೃತಿ ಸಮಿತಿಯನ್ನು ಪುನರ್ ರಚಿಸಲು ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ 2ರಲ್ಲಿ ಆಯುಕ್ತರು, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಇವರು ಬಾಗಲಕೋಟೆ ಜಿಲ್ಲೆಯಲ್ಲಿ ಜಿಲ್ಲಾ ಮಟ್ಟದ ಜಾಗೃತಿ ಸಮಿತಿಯನ್ನು ರಚಿಸುವ ಬಗ್ಗೆ ಅರ್ಹ ಸದಸ್ಯರುಗಳ ನಾಮನಿರ್ದೇಶನ ಪಟ್ಟಿಯೊಂದಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ನಿರ್ಧಿಷ್ಟ ಗುರಿಯ ಸಾರ್ವಜನಿಕ ವಿತರಣಾ ವ್ಯವಸ್ಥೆ ಹಾಗೂ ಸದರಿ ವ್ಯವಸ್ಥೆಯಡಿ ಜಾರಿಗೊಳಿಸಲಾಗಿರುವ "ಅನ್ನಭಾಗ್ಯ" ಯೋಜನೆಯ ಸಮರ್ಪಕ ಅನುಷ್ಟಾನ ಹಾಗೂ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ನ್ಯಾಯಬೆಲೆ ಅಂಗಡಿಗಳ ಸೂಕ್ತ ಮೇಲ್ವಿಚಾರಣೆಗಾಗಿ ಜಿಲ್ಲಾ ಮಟ್ಟದ ಜಾಗೃತಿ ಸಮಿತಿಯನ್ನು ಈ ಕೆಳಗಿನಂತೆ ಪುನರ್ ರಚಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಆನಾಸ 387 ಡಿಆರ್‌ಎ 2014, ಬೆಂಗಳೂರು, ದಿನಾಂಕ: 18ನೇ ನವೆಂಬರ್ 2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬಾಗಲಕೋಟೆ ಜಿಲ್ಲೆಯಲ್ಲಿ ಜಿಲ್ಲಾ ಮಟ್ಟದ ಜಾಗೃತ ಸಮಿತಿಯನ್ನು ಈ ಕೆಳಕಂಡಂತೆ ಪುನರ್ ರಚಿಸಿ ಆದೇಶಿಸಿದೆ.

| | | |
|---|---|---|
| 1. | ಜಿಲ್ಲಾ ಉಸ್ತುವಾರಿ ಸಚಿವರು | – ಅಧ್ಯಕ್ಷರು |
| 2. | ಜಿಲ್ಲಾ ಪಂಚಾಯತ್ ಅಧ್ಯಕ್ಷರು | – ಉಪಾಧ್ಯಕ್ಷರು |
| 3. | ಜಿಲ್ಲಾಧಿಕಾರಿಗಳು | – ಸದಸ್ಯರು |
| 4. | ಪಂಚಾಯತ್ ಕಾರ್ಯನಿರ್ವಹಣಾಧಿಕಾರಿಗಳು | – ಸದಸ್ಯರು |
| 5. | ಶ್ರೀಮತಿ ರೇಣುಕಾ, ಮಹೇಶ ದಶವಂತ ಮನೆ ನಂ.529, ರಾಜೀವಗಾಂಧಿ ಆಶ್ರಯ ಕಾಲನಿ, ನವನಗರ, ಬಾಗಲಕೋಟೆ | – ಅಧಿಕಾರೇತರ ಸದಸ್ಯರು |
| 6. | ಶ್ರೀಮತಿ ಭಾಗೀರಥಿ, ಲಕ್ಷ್ಮಣ ತಳವಾರ, ಮನೆ ನಂ.240, ರಾಜೀವಗಾಂಧಿ ಆಶ್ರಯ ಕಾಲನಿ, ನವನಗರ, ಬಾಗಲಕೋಟೆ | – ಅಧಿಕಾರೇತರ ಸದಸ್ಯರು |
| 7. | ಶ್ರೀಮತಿ ಪ್ರವೀಣಬಾನು, ಮುನಿರಹ್ಮದ ಡಾಲಾಯತ ಸೆಕ್ಟರ್ ನಂ.45 ಪ್ಲಾಟ್ ನಂ.547, ನವನಗರ ಬಾಗಲಕೋಟೆ | – ಅಧಿಕಾರೇತರ ಸದಸ್ಯರು |
| 8. | ಶ್ರೀಮತಿ ರೇಖಾ, ಪಿ.ಕಾಂತಿ, ಪೋ.ನಾವಲಗಿ, ತಾ॥ ಜಮಖಂಡಿ | – ಅಧಿಕಾರೇತರ ಸದಸ್ಯರು |
| 9. | ಶ್ರೀ ಎಂ.ಎಸ್.ಪಾಟೀಲ, ವಕೀಲರು, ಮಹಾವೀರ ರಸ್ತೆ, ಬಾಗಲಕೋಟೆ | – ಅಧಿಕಾರೇತರ ಸದಸ್ಯರು |
| 10. | ಉಪನಿರ್ದೇಶಕರು, ಆನಾಸ ಇಲಾಖೆ, ಬಾಗಲಕೋಟೆ | – ಸದಸ್ಯ ಕಾರ್ಯದರ್ಶಿ |

**ಜಾಗೃತಿ ಸಮಿತಿಯ ಕಾರ್ಯ ಚಟುವಟಿಕೆಗಳು:**

1. ಜಿಲ್ಲೆಯ ಎಲ್ಲಾ ನ್ಯಾಯಬೆಲೆ ಅಂಗಡಿಗಳ ಕಾರ್ಯನಿರ್ವಹಣೆಯ ಮೇಲುಸ್ತುವಾರಿ ಮಾಡುವುದು.
2. ಜಿಲ್ಲಾ ಮತ್ತು ತಾಲ್ಲೂಕು ಮಟ್ಟದಲ್ಲಿ ಸಗಟು ಮಳಿಗೆಗಳ offtake ಮೇಲುಸ್ತುವಾರಿ ಮಾಡುವುದು.
3. ಪಡಿತರ ಚೀಟಿ ಕೋರಿ ಸಲ್ಲಿಸಿರುವ ಹೊಸ ಅರ್ಜಿಗಳನ್ನು ಮತ್ತು ಅನುಮೋದಿತ/ತಿರಸ್ಕೃತ ಹಾಗೂ ಕೈಬಿಡಲಾಗಿರುವ ನಕಲಿ ಪಡಿತರ ಚೀಟಿಗಳನ್ನು ಮೇಲುಸ್ತುವಾರಿ ಮಾಡತಕ್ಕದ್ದು.
4. ರಾಜ್ಯದ ಅನ್ನಭಾಗ್ಯ ಯೋಜನೆಯನ್ನು ಬಲಪಡಿಸಲು ಹಾಗೂ ಸದರಿ ಯೋಜನೆಯ ಸಮರ್ಪಕ ಅನುಷ್ಟಾನಕ್ಕೆ ಸಲಹೆಗಳನ್ನು ನೀಡುವುದು.

**ಷರತ್ತುಗಳು**

ಅ) ಜಾಗೃತ ಸಮಿತಿಗಳು ಕನಿಷ್ಠ ತಿಂಗಳಿಗೆ ಒಮ್ಮೆಯಾದರೂ ಸಭೆ ಸೇರತಕ್ಕದ್ದು. ಯಾವುದೇ ಸರ್ಕಾರೇತರ ಸದಸ್ಯರು ಟಿ.ಎ/ಡಿ.ಎ ಪಡೆಯಲು ಅರ್ಹತೆ ಇರುವುದಿಲ್ಲ.

ಆ) ಜಿಲ್ಲಾ ಮಟ್ಟದ ಜಾಗೃತಿ ಸಮಿತಿಯ ಅಧಿಕಾರ ಅವಧಿಯು ರಚನೆಗೊಂಡ ದಿನಾಂಕದಿಂದ ಒಂದು ವರ್ಷ ಆಗಿರುತ್ತದೆ. (ಜಿಲ್ಲಾ ಉಸ್ತುವಾರಿ ಸಚಿವರು ಮತ್ತು ಜಿಲ್ಲಾ ಪಂಚಾಯತ್ ಅಧ್ಯಕ್ಷರನ್ನು ಹೊರತುಪಡಿಸಿ)

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ವಿ.ಪ್ರಭಾಕರ್**

ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ),

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ

(ಆಹಾರ–1&2).

**P.R: 862**

**S.C. 200**

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** ನಿರ್ಧಿಷ್ಟ ಗುರಿಯ ಸಾರ್ವಜನಿಕ ವಿತರಣಾ ಪದ್ಧತಿ(TPDS)ಯಡಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಜಿಲ್ಲಾ ಮಟ್ಟದ ಜಾಗೃತ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಆನಾಸ 144 ಡಿಆರ್ಎ 2013, ದಿನಾಂಕ: 26–10–2013.

2. ಆಯುಕ್ತರು, ಆನಾಸ ಮತ್ತು ಗ್ರಾವ್ಯ ಇಲಾಖೆ, ಇವರ ಪತ್ರ ಸಂಖ್ಯೆ: ಸಿಎಫ್ಎಸ್/ಪಿಡಿ/ನ್ಯಾಬೆಅಂ/II/102/2012–13, ದಿನಾಂಕ: 10–10–2014.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಸಂಖ್ಯೆ 1ರ ದಿನಾಂಕ: 26–10–2013ರ ಆದೇಶದಲ್ಲಿ ನಿರ್ಧಿಷ್ಟ ಗುರಿಯ ಸಾರ್ವಜನಿಕ ವಿತರಣಾ ಪದ್ಧತಿ(TPDS)ಯಡಿಯ ಕಾರ್ಯಚಟುವಟಿಕೆಗಳನ್ನು ನಿಯಮಿತವಾಗಿ ಪರಿಶೀಲಿಸಲು ಜಿಲ್ಲಾ ಮಟ್ಟದಲ್ಲಿ ಜಾಗೃತಿ ಸಮಿತಿಯನ್ನು ಪುನರ್ ರಚಿಸಲು ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮಸಂಖ್ಯೆ 2ರಲ್ಲಿ ಆಯುಕ್ತರು, ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ ಇವರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಜಿಲ್ಲಾ ಮಟ್ಟದ ಜಾಗೃತಿ ಸಮಿತಿಯನ್ನು ರಚಿಸುವ ಬಗ್ಗೆ ಕೋರಿ ಸಮಿತಿಗೆ ಅರ್ಹ ಸದಸ್ಯರುಗಳನ್ನು ನಾಮನಿರ್ದೇಶನ ಪಟ್ಟಿಯೊಂದಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ನಿರ್ಧಿಷ್ಟ ಗುರಿಯ ಸಾರ್ವಜನಿಕ ವಿತರಣಾ ವ್ಯವಸ್ಥೆ ಹಾಗೂ ಸದರಿ ವ್ಯವಸ್ಥೆಯಡಿ ಜಾರಿಗೊಳಿಸಲಾಗಿರುವ "ಅನ್ನಭಾಗ್ಯ" ಯೋಜನೆಯ ಸಮರ್ಪಕ ಅನುಷ್ಠಾನ ಹಾಗೂ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ನ್ಯಾಯಬೆಲೆ ಅಂಗಡಿಗಳ ಸೂಕ್ತ ಮೇಲ್ವಿಚಾರಣೆಗಾಗಿ ಜಿಲ್ಲಾ ಮಟ್ಟದ ಜಾಗೃತ ಸಮಿತಿಯನ್ನು ಈ ಕೆಳಗಿನಂತೆ ಪುನರ್ ರಚಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಆನಾಸ 388 ಡಿಆರ್ಎ 2014, ಬೆಂಗಳೂರು, ದಿನಾಂಕ: 18ನೇ ನವೆಂಬರ್ 2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಜಿಲ್ಲಾ ಮಟ್ಟದ ಜಾಗೃತ ಸಮಿತಿಯನ್ನು ಈ ಕೆಳಕಂಡಂತೆ ಪುನರ್ ರಚಿಸಿ ಆದೇಶಿಸಿದೆ.

| | | |
|---|---|---|
| 1. | ಜಿಲ್ಲಾ ಉಸ್ತುವಾರಿ ಸಚಿವರು | – ಅಧ್ಯಕ್ಷರು |
| 2. | ಜಿಲ್ಲಾ ಪಂಚಾಯತ್ ಅಧ್ಯಕ್ಷರು | – ಉಪಾಧ್ಯಕ್ಷರು |
| 3. | ಜಿಲ್ಲಾಧಿಕಾರಿಗಳು | – ಸದಸ್ಯರು |
| 4. | ಪಂಚಾಯತ್ ಕಾರ್ಯನಿರ್ವಹಣಾಧಿಕಾರಿಗಳು | – ಸದಸ್ಯರು |
| 5. | ಶ್ರೀಮತಿ ವೃಂದ, ಶಿವಾಜಿನಗರ, ಪಿ.ಓ ಮೇರಮಜಲು, ಬಂಟ್ವಾಳ ತಾಲ್ಲೂಕು | – ಅಧಿಕಾರೇತರ ಸದಸ್ಯರು |
| 6. | ಶ್ರೀಮತಿ ವಿಜಯಲಕ್ಷ್ಮಿ, ಮಾಜಿ ಕಾರ್ಪೊರೇಟರ್, ನಂ.24–6–732 ಮಂಜುಶ್ರೀ ಕಾಂಪೌಂಡ್, 7ನೇ ಅಡ್ಡರಸ್ತೆ, ಅತ್ತಾವರ | – ಅಧಿಕಾರೇತರ ಸದಸ್ಯರು |
| 7. | ಶ್ರೀ ರಾಜಶೇಖರ ನಾಯಕ್, ಕಂಡಿಗಮನೆ, ಸಜಿಪಮುನ್ನೂರು ಗ್ರಾಮ ಮತ್ತು ಅಂಚೆ, ಬಂಟ್ವಾಳ ತಾಲ್ಲೂಕು | – ಅಧಿಕಾರೇತರ ಸದಸ್ಯರು |
| 8. | ಶ್ರೀ ಮಹಮ್ಮದ್, ಮೈಂದನಡ್ಕ ಮನೆ, ಬಡಗನ್ನೂರು ಪುತ್ತೂರು ತಾಲ್ಲೂಕು | – ಅಧಿಕಾರೇತರ ಸದಸ್ಯರು |
| 9. | ಶ್ರೀ ಕೇಶವಗೌಡ ಬಿನ್ ಬಾಬುಗೌಡ ಪಾದೆ ಹಿತ್ಲು ಮನೆ ಕಂಚಿಮಾರುಬೈಲು, ಧರ್ಮಸ್ಥಳ, ಬೆಳ್ತಂಗಡಿ ತಾಲ್ಲೂಕು | – ಅಧಿಕಾರೇತರ ಸದಸ್ಯರು |
| 10. | ಉಪನಿರ್ದೇಶಕರು, ಆನಾಸ ಇಲಾಖೆ, ದಕ್ಷಿಣ ಕನ್ನಡ | – ಸದಸ್ಯ ಕಾರ್ಯದರ್ಶಿ |

**ಜಾಗೃತಿ ಸಮಿತಿಯ ಕಾರ್ಯ ಚಟುವಟಿಕೆಗಳು:**

1. ಜಿಲ್ಲೆಯ ಎಲ್ಲಾ ನ್ಯಾಯಬೆಲೆ ಅಂಗಡಿಗಳ ಕಾರ್ಯನಿರ್ವಹಣೆಯ ಮೇಲುಸ್ತುವಾರಿ ಮಾಡುವುದು.
2. ಜಿಲ್ಲಾ ಮತ್ತು ತಾಲ್ಲೂಕು ಮಟ್ಟದಲ್ಲಿ ಸಗಟು ಮಳಿಗೆಗಳ offtake ಮೇಲುಸ್ತುವಾರಿ ಮಾಡುವುದು.
3. ಪಡಿತರ ಚೀಟಿ ಕೋರಿ ಸಲ್ಲಿಸಿರುವ ಹೊಸ ಅರ್ಜಿಗಳನ್ನು ಮತ್ತು ಅನುಮೋದಿತ/ತಿರಸ್ಕೃತ ಹಾಗೂ ಕೈಬಿಡಲಾಗಿರುವ ನಕಲಿ ಪಡಿತರ ಚೀಟಿಗಳನ್ನು ಮೇಲುಸ್ತುವಾರಿ ಮಾಡತಕ್ಕದ್ದು.
4. ರಾಜ್ಯದ ಅನ್ನಭಾಗ್ಯ ಯೋಜನೆಯನ್ನು ಬಲಪಡಿಸಲು ಹಾಗೂ ಸದರಿ ಯೋಜನೆಯ ಸಮರ್ಪಕ ಅನುಷ್ಠಾನಕ್ಕೆ ಸಲಹೆಗಳನ್ನು ನೀಡುವುದು.

**ಷರತ್ತುಗಳು**

ಅ) ಜಾಗೃತ ಸಮಿತಿಗಳು ಕನಿಷ್ಠ ತಿಂಗಳಿಗೆ ಒಮ್ಮೆಯಾದರೂ ಸಭೆ ಸೇರತಕ್ಕದ್ದು. ಯಾವುದೇ ಸರ್ಕಾರೇತರ ಸದಸ್ಯರು ಟಿ.ಎ/ಡಿ.ಎ ಪಡೆಯಲು ಅರ್ಹತೆ ಇರುವುದಿಲ್ಲ.

ಆ) ಜಿಲ್ಲಾ ಮಟ್ಟದ ಜಾಗೃತಿ ಸಮಿತಿಯ ಅಧಿಕಾರ ಅವಧಿಯು ರಚನೆಗೊಂಡ ದಿನಾಂಕದಿಂದ ಒಂದು ವರ್ಷ ಆಗಿರುತ್ತದೆ. (ಜಿಲ್ಲಾ ಉಸ್ತುವಾರಿ ಸಚಿವರು ಮತ್ತು ಜಿಲ್ಲಾ ಪಂಚಾಯತ್ ಅಧ್ಯಕ್ಷರನ್ನು ಹೊರತುಪಡಿಸಿ)

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ವಿ.ಪ್ರಭಾಕರ್**

ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರ),

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ

(ಆಹಾರ-1&2).

**P.R: 863**

**S.C. 200**

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ವನ್ಯಜೀವಿ (ಸಂರಕ್ಷಣಾ) ಕಾಯ್ದೆ, 1972 ಸೆಕ್ಷನ್ 4(1) (ಬಿಬಿ) ರ ಪ್ರಕಾರ ಕರ್ನಾಟಕದಲ್ಲಿ ಗೌರವ ವನ್ಯಜೀವಿ ಪರಿಪಾಲಕರನ್ನಾಗಿ ಎರಡು ವರ್ಷಗಳ ಅವಧಿಗೆ ನೇಮಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಅಪಜೀ 24 ಎಫ್‌ಡಬ್ಲ್ಯೂಎಲ್ 2014, ದಿನಾಂಕ: 20-03-2012.
2. ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ) ಮತ್ತು ಮುಖ್ಯ ವನ್ಯಜೀವಿ ಪರಿಪಾಲಕರು ಇವರ ಪತ್ರ ಸಂಖ್ಯೆ: ಬಿ2/ಸಿಡಬ್ಲ್ಯೂಎಲ್/ಸಿಆರ್:28/2014-15, ದಿನಾಂಕ: 30-09-2014.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:20-03-2012ರ ಆದೇಶದಲ್ಲಿ ರಾಜ್ಯದಲ್ಲಿ ವನ್ಯಜೀವಿ (ಸಂರಕ್ಷಣಾ) ಕಾಯ್ದೆ, 1972 ಸೆಕ್ಷನ್ 4(1) (ಬಿಬಿ) ರ ಪ್ರಕಾರ ಸರ್ಕಾರವು ಎರಡು ವರ್ಷಗಳ ಅವಧಿಗೆ ಗೌರವ ವನ್ಯಜೀವಿ ಪರಿಪಾಲಕರನ್ನು ನೇಮಕ ಮಾಡಿದ್ದು, ಈಗ ಸದರಿ ಅವಧಿಯು ಮುಕ್ತಾಯಗೊಂಡಿರುತ್ತದೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ: 30-09-2014ರ ಪತ್ರದಲ್ಲಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ (ವನ್ಯಜೀವಿ) ಮತ್ತು ಮುಖ್ಯವನ್ಯಜೀವಿ ಪರಿಪಾಲಕರು 27 ಮಂದಿಯನ್ನು ಗೌರವ ವನ್ಯಜೀವಿ ಪರಿಪಾಲಕರನ್ನು ಎರಡು ವರ್ಷಗಳ ಅವಧಿಗೆ ಅವರುಗಳ ಹೆಸರುಗಳ ಮುಂದೆ ಸೂಚಿಸಿರುವ ಜಿಲ್ಲೆಗಳಿಗೆ ನೇಮಕ ಮಾಡಿ ಆದೇಶ ಹೊರಡಿಸಲು ಕೋರಿರುತ್ತಾರೆ.

ಪ್ರಸ್ತಾವನೆ ಪರಿಶೀಲಿಸಲಾಯಿತು. ಅದರಂತೆ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 367 ಎಫ್‌ಡಬ್ಲ್ಯೂಎಲ್ 2014, ಬೆಂಗಳೂರು ದಿನಾಂಕ: 27-10-2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸರ್ಕಾರವು ವನ್ಯಜೀವಿ (ಸಂರಕ್ಷಣಾ) ಕಾಯ್ದೆ 1972 ಸೆಕ್ಷನ್ 4(1) (ಬಿಬಿ) ರ ಪ್ರಕಾರ ಈ ಕೆಳಕಂಡವರನ್ನು ಗೌರವ ವನ್ಯಜೀವಿ ಪರಿಪಾಲಕರನ್ನಾಗಿ ಅವರುಗಳ ಹೆಸರಿನ ಮುಂದೆ ತೋರಿಸಿರುವ ಜಿಲ್ಲೆಗಳಿಗೆ ಎರಡು ವರ್ಷಗಳ ಅವಧಿಗೆ ಈ ಆದೇಶ ಹೊರಡಿಸಿದ ದಿನಾಂಕದಿಂದ ಅನ್ವಯವಾಗುವಂತೆ ಹಾಗೂ ಮುಂದಿನ ಆದೇಶದವರೆಗೆ ಎರಡು ವರ್ಷಗಳ ಅವಧಿಗೆ ನೇಮಕ ಮಾಡಿದೆ.

| ಕ್ರಮ ಸಂಖ್ಯೆ | ಪ್ರಸ್ತುತ ಗೌರವ ವನ್ಯಜೀವಿ ಪರಿಪಾಲಕರನ್ನಾಗಿ ನೇಮಕ ಮಾಡಲು ಶಿಫಾರಸ್ಸು ಮಾಡಿದವರ ಹೆಸರು | ನೇಮಕಾತಿ ಜಿಲ್ಲೆ |
|---|---|---|
| 1 | ಶ್ರೀ ಎಂ.ಆರ್.ದೇಸಾಯಿ,<br>ಯಡಹಳ್ಳಿ, ಬೀಳಗಿ ತಾಲ್ಲೂಕು | ಬಾಗಲಕೋಟೆ |
| 2 | 1. ಶ್ರೀ ನಂದಿದುರ್ಗ ಬಾಲುಗೌಡ,<br>ಕೃಷ್ಣ ಪಾರಿಜಾತ, ನಂ.678, ಹೆಚ್.ಎ.ಎಲ್,<br>3ನೇ ಹಂತ, ಬೆಂಗಳೂರು-560 075<br>2. ಶ್ರೀ ಶರತ್ ಬಾಬು,<br>Environment Advisor, BBMP Forest Cell, ಬೆಂಗಳೂರು | ಬೆಂಗಳೂರು ನಗರ |
| 3 | 1. ಶ್ರೀಮತಿ ನಿಸರ್ಗ,<br>ಇಂಡಿಯನ್ ಗ್ರೀನ್ ಪೀಸ್, 678,<br>ಹೆಚ್.ಎ.ಎಲ್.ಮೂರನೇ ಹಂತ,<br>ಬೆಂಗಳೂರು-75<br>2. ಶ್ರೀಮತಿ ಸೀಮಾ ಬೇಗಂ ಕಲೀಲ್,<br>ಟೈಗರ್ಸ್ ಅನ್‌ಲಿಮಿಟೆಡ್ ವೈಲ್ಡ್‌ಲೈಫ್ ಸೊಸೈಟಿ, 285/61,<br>ನೆಲಮಹಡಿ, 1ನೇ ಮುಖ್ಯರಸ್ತೆ, ಲೋವರ್ ಪ್ಯಾಲೇಸ್ ಆರ್ಚ್‌ಡ್ಸ್,<br>ಸದಾಶಿವನಗರ, ಬೆಂಗಳೂರು-03 | ಬೆಂಗಳೂರು ಗ್ರಾಮಾಂತರ |

| | | |
|---|---|---|
| 4 | ಶ್ರೀ ಸಚೀನ ಮಲ್ಲನಗೌಡ ಪಾಟೀಲ,<br>341, ರೈಲ್ವೆ ರಸ್ತೆ, ತೈಲಾಕಮಂಡಿ, ಬೆಳಗಾವಿ | ಬೆಳಗಾವಿ |
| 5 | ಡಾ.ಅರುಣ ಎಸ್.ಕೆ<br>ಧನ್ವಂತರಿ ನರ್ಸಿಂಗ್ ಹೋಮ್, 3ನೇ ಅಡ್ಡರಸ್ತೆ,<br>ಸತ್ಯನಾರಾಯಣಪೇಟೆ, ಬಳ್ಳಾರಿ | ಬಳ್ಳಾರಿ |
| 6 | ಶ್ರೀ ಶೈಲೇಂದ್ರ ಕಾವಾರಿ ತಂದೆ, ಗದಿಗೆಪ್ಪಾ ಕಾವರಿ,<br>ಪತ್ರಕರ್ತರು, ಮನೆ ನಂ.13–173, ಆನಂದಸ್ವಾಮಿ ಸ್ಟ್ರೀಟ್,<br>ಅಂಚೆ ಹುಮುನಾಬಾದ, ಬೀದರ್ ಜಿಲ್ಲೆ | ಬೀದರ್ |
| 7 | ಶ್ರೀ ಗಂಗಾಧರರಾವಗೌಡ ಶಂಕರರಾವಗೌಡ ನಾಡಗೌಡ,<br>ಸಾ:ಬಲದಿನ್ನಿ ತಾ: ಮುದ್ದೇಬಿಹಾಳ ಜಿಲ್ಲೆ, ಬಿಜಾಪುರ | ಬಿಜಾಪುರ |
| 8 | 1. ಶ್ರೀ ಎನ್.ಎಂ.ನವೀನ್, ಬಿನ್ ಕೆ.ಆರ್.ಮೋಹನ್ ಕುಮಾರ್,<br>#479, ಕಾಮಧೇನು, 4ನೇ ಅಡ್ಡರಸ್ತೆ, ಮಾರುತಿ ದೇವಸ್ಥಾನದ ರಸ್ತೆ,<br>ಕುವೆಂಪುನಗರ, ಮೈಸೂರು<br>2. ಶ್ರೀ ಎಂ.ಜಡೇಗೌಡ ಬಿನ್ ತುಂಡುಮಾದೇಗೌಡ,<br>ಎಂ.ಎಸ್ಸಿ. (ಕೃಷಿ) ಪದವೀಧರರು, ಹೊಸಪೋಡು ಕಾಲೋನಿ,<br>ಬಿಳಿಗಿರಿರಂಗನಬೆಟ್ಟ | ಚಾಮರಾಜನಗರ |
| 9 | ಶ್ರೀ ಸತೀಶ್ ಗೌಡ,<br>ಟೆಂಪಲ್ ಟ್ರೀ ಫಾರ್ಮ್, ಹೊನ್ನಾಲ ಗ್ರಾಮ,<br>ಸಿರವಾಸೆ ಅಂಚೆ, ಚಿಕ್ಕಮಗಳೂರು | ಚಿಕ್ಕಮಗಳೂರು |
| 10 | ಶ್ರೀ ಎಸ್.ಗೋವಿಂದರಾಜು,<br>ಛಾಯಾಗ್ರಾಹಕರು, ಪುಣ್ಯಕೋಟಿ, ಟೆಲಿಫೋನ್ ಟವರ್ ಹತ್ತಿರ,<br>ಟಿ.ಆರ್.ನಗರ, ಚಳ್ಳಕೆರೆ, ಚಿತ್ರದುರ್ಗ | ಚಿತ್ರದುರ್ಗ |
| 11 | ಶ್ರೀ ರಿತಿಕ ಮಂಜುಳ,<br>ಇಂಡಿಯನ್ ಗ್ರೀನ್ ಪೀಸ್, ನಿರ್ದೇಶಕರು,<br>ಭಾರತೀಯ ಕರ್ನಾಟಕ ಸಂಘ ಹಾಗೂ ಪ್ರಖ್ಯಾತ ವೈದ್ಯರು,<br>ಇಂದಿರಾನಗರ, ಬೆಂಗಳೂರು | ಚಿಕ್ಕಬಳ್ಳಾಪುರ |
| 12 | ಡಾ॥ ಟಿ.ಜಿ.ರವಿಕುಮಾರ್,<br>ಜನರಲ್ ಸರ್ಜನ್, ಸರ್ಕಾರಿ ಆಸ್ಪತ್ರೆ, ಜಗಳೂರು | ದಾವಣಗೆರೆ |
| 13 | ಶ್ರೀ ಜಿ.ಎಸ್.ಕಲ್ಲೂರ,<br>C/o ಎಸ್.ಸಿ.ಮೆಣಸಿನಕಾಯಿ, ಸ್ಟೇಶನ್ ರೋಡ್, ಮಾಳಮಡ್ಡಿ,<br>ಧಾರವಾಡ | ಧಾರವಾಡ |
| 14 | ಪ್ರೊ ಸಿ.ಎಸ್.ಅರಸನಾಳ,<br>ಉಪನ್ಯಾಸಕರು, ರಸಾಯನಶಾಸ್ತ್ರ ವಿಭಾಗ,<br>ಜೆ.ಎ.ಸಂಯುಕ್ತ ಪದವಿ ಪೂರ್ವ ಕಾಲೇಜು,<br>ಮುಂಡರಗಿ, ಗದಗ ಜಿಲ್ಲೆ | ಗದಗ |
| 15 | ಡಾ॥ ಮೇಜರ್ ಎಸ್.ಎಸ್.ಹಟ್ಟಿ<br>ಮುಖ್ಯಸ್ಥರು, ಪ್ರಾಣಿಶಾಸ್ತ್ರ ವಿಭಾಗ,<br>ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಗುಲ್ಬರ್ಗಾ | ಗುಲ್ಬರ್ಗಾ |
| 16 | ಶ್ರೀ ಹೆಚ್.ಪಿ.ಮೋಹನ್ ಎಂ.ಎಸ್ಸಿ(ಅಗ್ರಿ)<br>ನಂ:117, ಹೇಮಾಲಯ, ರವೀಂದ್ರನಗರ, ಹಾಸನ | ಹಾಸನ |
| 17 | ಶ್ರೀಮತಿ ಮಾಧುರಿ ಜಿ.ದೇವದಾರ<br>ದೇವದಾರ್ ಹಾಸ್ಪಿಟಲ್ ಕಾಂಪೌಂಡ್,<br>ಸ್ಟೇಷನ್ ರಸ್ತೆ, ಹಾವೇರಿ | ಹಾವೇರಿ |

| | | |
|---|---|---|
| 18 | ತ್ಯಾಗರಾಜು ಕೆ.ಎನ್.ಲೇಟ್ ನಾರಾಯಣರಾಜು ಕೆ.ವಿ.<br>ಡಬ್ಲ್ಯೂ 8–66 ಗಲ್‌ಪೇಟೆ ಕೋಲಾರ | ಕೋಲಾರ |
| 19 | ಶ್ರೀ ಇಂದ್ರಜಿತ್ ಗೋರ್ಪಡೆ<br>ಯಶವಂತ ವಿಹಾರ, ಹಗೆದಾಳ ಅಂಚೆ, ಯಲಬುರ್ಗಾ<br>ತಾ:ಕೊಪ್ಪಳ ಜಿಲ್ಲೆ | ಕೊಪ್ಪಳ |
| 20 | 1.ಶ್ರೀ ನಿರದ್ ಮುತ್ತಣ್ಣ<br>ಅಮ್ಮಂಗಾಲ ಗ್ರಾಮ, ವಾಲ್ನೂರು ಅಂಚೆ,<br>ಸೋಮವಾರಪೇಟೆ, ತಾ: ಕೊಡಗು ಜಿಲ್ಲೆ<br>2.ತ್ಯಾಗ್ ಉತ್ತಪ್ಪ,<br>ನೀಲಾದ್ರಿ ಮಹಲ್, ಜಯಮಹಲ್, ಬೆಂಗಳೂರು | ಮಡಿಕೇರಿ |
| 21 | ಡಾ॥ ಬಿ.ಎಂ.ನಾಗಪ್ಪ ಎಂ.ಎ. ಪಿ.ಹೆಚ್.ಡಿ.<br>ಇಂಟಿಗ್ರೇಟೆಡ್ ರೂರಲ್ ಅಂಡ್ ಅರ್ಬನ್ ಡೆವಲಪ್‌ಮೆಂಟ್,<br>ಇನ್ಸ್‌ಟ್ಯೂಟ್ ಆಫ್ ಆಡ್ಮಿನ್ ಆಫೀಸರ್, ಬಿಡಿಒ ಆಫೀಸ್ ಹತ್ತಿರ,<br>ಮೈಸೂರು ರಸ್ತೆ, ಮಳವಳ್ಳಿ, ಮಂಡ್ಯ | ಮಂಡ್ಯ |
| 22 | 1.ಶ್ರೀ ಶರತ್ ಚಂಪತ್ತಿ<br>ಕಬಿನಿ ಫೌಂಡೇಶನ್, ಸರ್ವೆ ನಂ.57/315,<br>ಖಾರಾಪುರ ವಿಲೇಜ್, ಎನ್.ಬೆಲತ್ತೂರು ಅಂಚೆ,<br>ಹೆಚ್.ಡಿ.ಕೋಟೆ ತಾ.ಮೈಸೂರು<br>2.ಡಾ.ಹೆಚ್.ವಿ.ಸಂತೃಪ್ತ ಎಂ.ಎಸ್.<br>ವ್ಯವಸ್ಥಾಪಕ ನಿರ್ದೇಶಕರು, ನಜರಾಬಾದ್ ಮೆಡಿಕಲ್ ಸರ್ವಿಸ್<br>(ಪ್ರೈ)ಲಿ, ಟಿ.ನರಸೀಪುರ ರೋಡ್, ನಜರ್‌ಬಾದ್, ಮೈಸೂರು | ಮೈಸೂರು |
| 23 | ಡಾ.ರಾಮಪ್ಪ ಲೋಕೇಶ್,<br>ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು, ಸಸ್ಯ ಅನುವಂಶಿಕತೆ ಮತ್ತು<br>ತಳಿ ಅಭಿವೃದ್ಧಿ ಶಾಸ್ತ್ರ ವಿಭಾಗ, ಕೃಷಿ ಮಹಾವಿದ್ಯಾಲಯ,<br>ಕೃಷಿ ವಿಶ್ವ ವಿದ್ಯಾಲಯ ಆವರಣ, ರಾಯಚೂರು | ರಾಯಚೂರು |
| 24 | ಶ್ರೀ ಜಿ.ಎನ್.ಶ್ರೀಕಂಠಯ್ಯ, ಭಾಅಸೇ(ನಿವೃತ್ತ),<br>ಗಾಣೆಗಲ್ ವಿಲೇಜ್ ಮತ್ತು ಪೋಸ್ಟ್ ಆಫೀಸ್,<br>ಬಿಡದಿ ಹೋಬಳಿ, ರಾಮನಗರ ಜಿಲ್ಲೆ–562109 | ರಾಮನಗರ |
| 25 | ಡಾ.ಶ್ರೀಕಾಂತ್ ಹೆಗಡೆ.ಎಂ.ಡಿ,<br>ಫಿಸಿಷಿಯನ್ ಧನವಂತ್ರಿ, 5ನೇ ಕ್ರಾಸ್, ವೆಂಕಟೇಶನಗರ, ಶಿವಮೊಗ್ಗ | ಶಿವಮೊಗ್ಗ |
| 26 | ಶ್ರೀ ಟಿ.ವಿ.ಎನ್.ಮೂರ್ತಿ,<br>ಕೆಸರಾ 1ನೇ ಕ್ರಾಸ್, ಸಿ.ಎಸ್.ಡಿ.ಲೇಔಟ್, ತುಮಕೂರು | ತುಮಕೂರು |
| 27 | ಶ್ರೀ ನರಸಿಂಹ ಡಾ.ಭಟ್ಟ<br>ಸಾ: ಬಾಪೇಲಿ ತಾಲ್ಲೂಕು ಜೋಯಿಡಾ, ಉತ್ತರ ಕನ್ನಡ | ಉತ್ತರ ಕನ್ನಡ |
| 28 | ಶ್ರೀ ಕೆ.ರಾಜಗೋಪಾಲ ಶೆಟ್ಟಿ,<br>ನಿವೃತ್ತ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸೇನಾಪುರ ಅಂಚೆ,<br>ಕುಂದಾಪುರ ತಾಲ್ಲೂಕು, ಉಡುಪಿ ಜಿಲ್ಲೆ | ಉಡುಪಿ |

2 ಗೌರವ ವನ್ಯಜೀವಿ ಪರಿಪಾಲಕರ ಕರ್ತವ್ಯ ಮತ್ತು ಜವಾಬ್ದಾರಿಗಳು ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ಇರುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಪಿ.ಪಾಟೀಲ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ,

(ವನ್ಯಜೀವಿ ಮತ್ತು ಯೋಜನೆ).

**ANNEXURE-1 TO GOVERNMENT ORDER No: FEE 367 FWL 2014, dt: 27.10:.2014**

**DUTIES AND RESPONSIBILITIES OF THE HONORARY WILDLIFE WARDENS: .**

The main duty and responsibility of an Honorary Wildlife Wardens is to assist whole heartedly the Chief Wildlife Warden for WIldlife conservation and .protection work especially with regard to the following matter; .

i) Help and assist the Chief Wildlife Warden in Control of poaching and clandestine trade in wild animals and products/articles thereof.

ii) Help and assist the Chief Wildlife Warden in detection and prosecution of offences under the Wildlife (Protection) Act, and the Rules made there under.

iii) Help and assist in preventing damage to the habitat of Wild life including fire protection.

iv) Carrying the message of conservation to the people and enlisting public support for nature and wildlife conservation. The effort should be specially directed towards the communities living in or near the declared wildlife reserves;

v) Any other matter connected with the protection of wildlife which may be entrusted by the Chief Wildlife Warden of the State from time to time .

vi) Participate in carrying out wildlife census etc., on the specific request permission of the Chief Wildlife warden.

**POWERS**

In accordance with sub-section (3)·of Section 4 of the Wildlife (protection) Act, 1972, an Honorary Wildlife Warden appointed under sub-section (2) (c) of section 4 shall be subordinate to the Chief Wildlife Warden of the State and under Section 59 of aforesaid Act, he shall be deemed to be a public servant within the meaning of section; 21. of the Indian penal Code. Protection for action taken in good faith is provided under section 60 of the Act.

**GENERAL**

(A) No staff or vehicle support can be provided to Honorary Wardens as a matter of course. However, If the circumstances warrant, the departmental staff should provide all possible help and. assistance.

(B) It is also appropriate that the actual expenses incurred by an Honorary Warden on travel by public transport for carrying out the duties assigned to him should be reimbursed by the State Govenment. In addition, all actual expenses. incurred in the detection of an. offence under the Wildlife (Protection) Act, which leads to successful prosecution may be reimbursed after due verification.

(C) The State Government should recognize outstanding work or service rendered by any Honorary Warden. Such recognition can be by way of a letter of commendation, or a certificate signed by the Minister in charge of the Department or the membership of the State Wildlife Advisory Board. Cash grants could also be considered in suitable cases.

**S.P. PATIL**

Under Secretary to Government,

Forest, Environment and Ecology Department.

**P.R. 864**

**S.C. 100**

**ಒಳಾಡಳಿತ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ: ಹೆಚ್‌ಡಿ:118:38:ಹೆಚ್‌ಸಿಪಿ–1:2012, ಬೆಂಗಳೂರು, ದಿನಾಂಕ:19–09–2014**

ಸರ್ಕಾರದ ಆದೇಶ ಸಂಖ್ಯೆ: ಒಇ 381 ಪಿಪಿಇ 2007, ದಿನಾಂಕ:25–09–2007ರ ಆದೇಶದಲ್ಲಿ ಈ ಮುಂದಿನಂತೆ ತಿದ್ದುಪಡಿಯನ್ನು ಮಾಡಿಕೊಂಡು ಓದಿಕೊಳ್ಳತಕ್ಕದ್ದು.

ಆದೇಶ ಭಾಗದ ಉಪಕಂಡಿಕೆ (4)ರಲ್ಲಿ "**10 ವರ್ಷಕ್ಕೂ ಮೀರಿದ ಅವಧಿಗೆ ಜೈಲು ಶಿಕ್ಷೆಯನ್ನು ವಿಧಿಸಬಹುದಾದಂತಹ ಪ್ರಕರಣಗಳಲ್ಲಿ ಹಾಗೂ ವಿಶೇಷ ಕಾಯ್ದೆಯ ಪ್ರಕರಣಗಳಲ್ಲಿ ಶಿಕ್ಷೆಯ ಪ್ರಮಾಣ 7 ವರ್ಷಗಳಿಗಿಂತ ಕಡಿಮೆ ಇದ್ದರೂ ಸಹ ಅಂತಹ ಪ್ರಕರಣಗಳಲ್ಲಿ ಸರ್ಕಾರವು ನಿರ್ಣಯ ತೆಗೆದುಕೊಳ್ಳುವುದು**" – ಎಂದಿರುವುದನ್ನು "**10 ವರ್ಷಕ್ಕೂ ಮೀರಿದ ಅವಧಿಗೆ ಜೈಲು ಶಿಕ್ಷೆಯನ್ನು ವಿಧಿಸಬಹುದಾದಂತಹ ಪ್ರಕರಣಗಳಲ್ಲಿ ಸರ್ಕಾರವು ನಿರ್ಣಯ ತೆಗೆದುಕೊಳ್ಳುವುದು ಹಾಗೂ ಭಾರತ ದಂಡ ಸಂಹಿತೆಯಲ್ಲಿನ ಅಪರಾಧಗಳನ್ನು ಬಿಟ್ಟು ಉಳಿದ ವಿಶೇಷ ಕಾಯ್ದೆ ಅಡಿಯಲ್ಲಿ ಬರುವ ಅಪರಾಧಗಳ ಬಗ್ಗೆ 7 ವರ್ಷಗಳಿಗಿಂತ ಹೆಚ್ಚಿನ ಅವಧಿಯ ಶಿಕ್ಷೆಯುಳ್ಳಂತಹ ಅಪರಾಧಗಳ ಅಭಿಪ್ರಾಯಗಳನ್ನು ಮಾತ್ರ ಅಂತಿಮ ತೀರ್ಮಾನಕ್ಕಾಗಿ ಸರ್ಕಾರಕ್ಕೆ ಸಲ್ಲಿಸುವುದು ಮತ್ತು 3 ವರ್ಷಗಳಿಂದ 7 ವರ್ಷಗಳವರೆಗಿನ ಇತರೆ ಕಾಯ್ದೆಯಡಿ ಬರುವ ಅಪರಾಧಗಳ ಪ್ರಕರಣಗಳಲ್ಲಿ ಅಭಿಯೋಗ ನಿರ್ದೇಶಕರು ಅಂತಿಮ ನಿರ್ಣಯವನ್ನು ತೆಗೆದುಕೊಳ್ಳುವುದು ಹಾಗೂ 3 ವರ್ಷಗಳಿಗಿಂತ ಕಡಿಮೆ ಶಿಕ್ಷೆಯುಳ್ಳ ಇತರೇ ಕಾಯ್ದೆಯಡಿಯ ಅಪರಾಧಗಳ ಪ್ರಕರಣಗಳನ್ನು ವಲಯ ಮಟ್ಟದಲ್ಲಿ ಕಾನೂನು ಅಧಿಕಾರಿಗಳು(ಹಿರಿಯ),ರವರು ಅಂತಿಮ ನಿರ್ಣಯವನ್ನು ತೆಗೆದುಕೊಳ್ಳುವುದು**" ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮಂಜುನಾಥ್ ಜಿ.ಎ**

1ನೇ ಅಪರ ವಾದೇಕ್ಷಕರು ಹಾಗೂ ಪದನಿಮಿತ್ತ

ಸರ್ಕಾರದ ಉಪ ಕಾರ್ಯದರ್ಶಿ(ಪ್ರ),

ಒಳಾಡಳಿತ ಇಲಾಖೆ.

**P.R. 865**

**S.C. 100**

## ಕಂದಾಯ ಸಚಿವಾಲಯ

**ವಿಷಯ:** ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ತಾಲ್ಲೂಕು, ಪದವು ಗ್ರಾಮದ ಸರ್ವೆ ನಂ:70/3 ರಲ್ಲಿ 0.10 ಸೆಂಟ್ ಜಮೀನನ್ನು ಸೆಂಟ್ರಲ್ ವಾಟರ್ ಕಮೀಷನ್ ಸಬ್ ಸ್ಟೇಷನ್ ಕಟ್ಟಡ ನಿರ್ಮಾಣಕ್ಕಾಗಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ, ಮೈಸೂರು ಇವರ ಪತ್ರ ಸಂಖ್ಯೆ: ಎಲ್ಎನ್‌ಡಿ(1)ಸಿಆರ್: 96/2012–13 ದಿನಾಂಕ: 22–01–2014.

**ಪ್ರಸ್ತಾವನೆ:**

ಪ್ರಾದೇಶಿಕ ಆಯುಕ್ತರು, ಮೈಸೂರು ವಿಭಾಗ, ಮೈಸೂರು ಇವರು ದಿನಾಂಕ:22–01–2014ರ ಪತ್ರದಲ್ಲಿ ಮಂಗಳೂರು ತಾಲ್ಲೂಕು, ಪದವು ಗ್ರಾಮದ ಸರ್ವೆ ನಂ:70/3 ರಲ್ಲಿ 0.10 ಸೆಂಟ್ ಜಮೀನನ್ನು ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿ 1969 ನಿಯಮ 20 ರಡಿ ಸೆಂಟ್ರಲ್ ವಾಟರ್ ಕಮೀಷನ್ ಸಬ್ ಸ್ಟೇಷನ್ ಕಟ್ಟಡ ನಿರ್ಮಾಣಕ್ಕಾಗಿ ಮಂಜೂರು ಮಾಡುವ ಬಗ್ಗೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಜಿಲ್ಲಾಧಿಕಾರಿಯವರು ದಕ್ಷಿಣ ಕನ್ನಡ ಜಿಲ್ಲೆ ರವರು ದಿನಾಂಕ: 23–11–2012 ರಂದು ನೀಡಿರುವ ವರದಿಯಲ್ಲಿ ಮಂಗಳೂರು ತಾಲ್ಲೂಕು, ಪದವು ಗ್ರಾಮದ ಸರ್ವೆ ನಂ:70/3ರಲ್ಲಿ ಒಟ್ಟು ವಿಸ್ತೀರ್ಣ 0.40 ಸೆಂಟ್ ಸರ್ಕಾರಿ ಅನಾಧೀನ ಜಮೀನಾಗಿರುತ್ತದೆ. ಇದರಿಂದ ವಿಂಗಡಿಸದ ನಕ್ಷೆಯಲ್ಲಿ ಸರ್ವೆ ನಂ:70/3 ರಲ್ಲಿನ 0.10 ಸೆಂಟ್ ಜಮೀನನ್ನು ಸೆಂಟ್ರಲ್ ವಾಟರ್ ಕಮೀಷನ್ ಸಬ್ ಸ್ಟೇಷನ್ ಕಟ್ಟಡದ ಬಗ್ಗೆ ಪ್ರಸ್ತಾಪಿಸಲಾಗಿದೆ. ಪ್ರಸ್ತಾಪಿತ ಜಮೀನು ಮಹಾನಗರ ಪಾಲಿಕೆ ವ್ಯಾಪ್ತಿಯೊಳಗೆ ಬರುತ್ತಿದ್ದು, ಮಹಾನಗರ ಪಾಲಿಕೆ ನಿರಾಕ್ಷೇಪಣೆ ಪತ್ರ ನೀಡಿರುತ್ತಾರೆ. ಸದರಿ ಜಮೀನಿಗೆ ತಾಗಿಕೊಂಡು ಸಂಪರ್ಕ ರಸ್ತೆ ಇದ್ದು, ಇದು ಒಳರಸ್ತೆಯಾಗಿರುತ್ತದೆ. ರಾಷ್ಟ್ರೀಯ ಹೆದ್ದಾರಿಯಿಂದ ½ ಕಿ.ಮೀ. ದೂರ ಹಾಗೂ ಮಹಾನಗರ ಪಾಲಿಕೆ ರಸ್ತೆಯಿಂದ 100 ಮೀಟರ್ ದೂರದಲ್ಲಿದೆ. ಮರಮುಟ್ಟುಗಳಿರುವುದಿಲ್ಲ. ಸಾರ್ವಜನಿಕ ಪ್ರಕಟಣೆ ಪ್ರಚುರಪಡಿಸಿರುತ್ತಾರೆ. ಆಕ್ಷೇಪಣೆ ಬಂದಿರುವುದಿಲ್ಲ. ಗ್ರಾಮಸ್ಥರ ಸಮಕ್ಷಮ ಮಹಜರು ತಯಾರಿಸಿರುತ್ತಾರೆ. ತಹಶೀಲ್ದಾರರು ಸ್ಥಳ ಪರಿಶೀಲನೆ ನಡೆಸಿದ್ದು, ಪ್ರಸ್ತಾಪಿತ ಜಮೀನಿಗೆ ಮಾರ್ಗಸೂಚಿ ದರದಂತೆ ಸೆಂಟ್ಸ್ ಒಂದರ ದರ ರೂ.1,65,000–00 ಸ್ಥಳ ಮೌಲ್ಯವನ್ನು ವಿಧಿಸಬಹುದಾಗಿದೆ ಎಂದು ವರದಿ ಸಲ್ಲಿಸಿರುತ್ತಾರೆ.

ಸದರಿ ಜಮೀನನ್ನು ಮಾರ್ಗಸೂಚಿ ದರದಂತೆ ಸೆಂಟ್ಸ್ ಒಂದಕ್ಕೆ ರೂ.1,65,000–00 ಸ್ಥಳ ಮೌಲ್ಯ ಹಾಗೂ ಇನ್ನಿತರೆ ಶುಲ್ಕ ವಿಧಿಸಿ ಸೆಂಟ್ರಲ್ ವಾಟರ್ ಕಮೀಷನ್ ಸಬ್ ಸ್ಟೇಷನ್ ಕಟ್ಟಡ ನಿರ್ಮಾಣಕ್ಕೆ ಮಂಜೂರು ಮಾಡುವಂತೆ ಕೋರಿ ಪ್ರಾದೇಶಿಕ ಆಯುಕ್ತರು ಮೈಸೂರು ರವರು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ಮಂಜೂರಾತಿಗಾಗಿ ಪ್ರಸ್ತಾಪಿಸಲಾದ ಜಮೀನು ಸರ್ಕಾರಿ ಅನಾಧೀನ ಜಮೀನಾಗಿದ್ದು, ಇದು ಮಂಗಳೂರು ಮಹಾನಗರ ಪಾಲಿಕೆಯ ವ್ಯಾಪ್ತಿಯಲ್ಲಿ ಬರುತ್ತದೆ. ಈ ಜಮೀನು ಮಂಜೂರಾತಿಗೆ ಮಹಾನಗರ ಪಾಲಿಕೆ ನಿರಾಕ್ಷೇಪಣಾ ಪತ್ರವನ್ನು ನೀಡಿರುತ್ತದೆ. ಈ ಜಮೀನಿನಲ್ಲಿ ಮರಮುಟ್ಟುಗಳು ಇರುವುದಿಲ್ಲ. ಜಮೀನಿನ ಮಂಜೂರಾತಿ ಬಗ್ಗೆ ಸಾರ್ವಜನಿಕ ಪ್ರಕಟಣೆ ಪ್ರಚುರ ಪಡಿಸಲಾಗಿ, ಯಾರಿಂದಲೂ ಆಕ್ಷೇಪಣೆ ಬಂದಿರುವುದಿಲ್ಲ. ಇದರಿಂದಾಗಿ ಈ ಜಮೀನು ಮಂಜೂರಾತಿಗೆ ಮುಕ್ತವಾಗಿರುತ್ತದೆ. ಅಲ್ಲದೆ ಈ ಜಮೀನಿನ ಮಾರ್ಗಸೂಚಿ ಬೆಲೆ ಸೆಂಟ್ಸ್ ಒಂದಕ್ಕೆ ರೂ.1,65,000–00 ಗಳಾಗಿರುತ್ತದೆ. ಇದಕ್ಕೆ ಪೂರಕವಾಗಿ ಜಿಲ್ಲಾಧಿಕಾರಿಯವರು ಚೆಕ್‌ಲಿಸ್ಟ್‌ನಲ್ಲಿ ಅಗತ್ಯ ಮಾಹಿತಿಗಳನ್ನು ಒದಗಿಸಿರುತ್ತಾರೆ.

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ:–

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 35 ಎಲ್‌ಜಿಎ 2014, ದಿನಾಂಕ: 19–11–2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು ತಾಲ್ಲೂಕು, ಪದವು ಗ್ರಾಮದ ಸರ್ವೆ ನಂ:70/3 ರಲ್ಲಿ 0.10 ಸೆಂಟ್ ಜಮೀನನ್ನು ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿ 1969 ನಿಯಮ 20 ರಡಿ ಮಾರ್ಗಸೂಚಿ ದರ ಸೆಂಟ್ಸ್ ಒಂದಕ್ಕೆ ರೂ.1,65,000–00 ಹಾಗೂ ಇನ್ನಿತರ ಶುಲ್ಕ ವಿಧಿಸಿ ಸೆಂಟ್ರಲ್ ವಾಟರ್ ಕಮೀಷನ್ ಸಬ್ ಸ್ಟೇಷನ್ ಕಟ್ಟಡ ನಿರ್ಮಾಣಕ್ಕಾಗಿ ಕೇಂದ್ರ ವಾಟರ್ ಕಮೀಷನರ್‌ರವರಿಗೆ ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಮಂಜೂರು ಮಾಡಲು ಆದೇಶಿಸಿದೆ.

1. ಮಂಜೂರಾತಿ ಆದೇಶದಲ್ಲಿ ಪ್ರಸ್ತಾಪಿತ ಭೂಮಿಯ ಪ್ರಚಲಿತ ಮಾರುಕಟ್ಟೆ ದರ/ಮಾರ್ಗಸೂಚಿ ದರವನ್ನು ಕಡ್ಡಾಯವಾಗಿ ನಮೂದಿಸತಕ್ಕದ್ದು.
2. ಮಂಜೂರಾದ ಜಮೀನಿಗೆ ಸಂಸ್ಥೆಯು ಮೂರು ತಿಂಗಳ ಒಳಗೆ ಹಣವನ್ನು ಪಾವತಿಸಿ ಉದ್ದೇಶಿತ ಕಾರ್ಯಕ್ರಮಕ್ಕೆ ಜಮೀನನ್ನು ಸ್ವಾಧೀನಕ್ಕೆ ತೆಗೆದುಕೊಳ್ಳುವುದು.
3. ಮಂಜೂರಾದ ಭೂಮಿಯನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಎರಡು ವರ್ಷಗಳ ಅವಧಿಯೊಳಗೆ ಉಪಯೋಗಿಸತಕ್ಕದ್ದು.
4. ಮಂಜೂರಾದ ಭೂಮಿಯನ್ನು ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಬಳಸತಕ್ಕದ್ದಲ್ಲ.
5. ಮಂಜೂರಾದ ಜಮೀನಿನಲ್ಲಿ ಯಾವುದೇ ರೀತಿಯ ಅತಿಕ್ರಮಣವಾಗದಂತೆ ಕ್ರಮವಹಿಸತಕ್ಕದ್ದು.
6. ಮಂಜೂರು ಮಾಡಲ್ಪಡುವ ಜಮೀನಿನ ಮೇಲೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ ಈ ಮಂಜೂರಾತಿಯು ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
7. ಮಂಜೂರಾದ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಮಾರಾಟ ಮಾಡುವುದಾಗಲೀ ಗುತ್ತಿಗೆ/ ಉಪಗುತ್ತಿಗೆ ನೀಡುವುದಾಗಲೀ, ಅಡಮಾನ, ವರ್ಗಾವಣೆ, ದಾನ, ಇತರೆ ಯಾವುದೇ ರೀತಿಯ ಪರಭಾರೆಯನ್ನು ಮಾಡಬಾರದು.
8. ಮಂಜೂರಾದ ಜಮೀನಿನ ಯಾವುದೇ ಭಾಗವು ಸಾರ್ವಜನಿಕ ಉದ್ದೇಶಕ್ಕೆ ಅಗತ್ಯವಾಗಿದ್ದಲ್ಲಿ ಸರ್ಕಾರವು ಸದರಿ ಜಮೀನನ್ನು ಪರಿಹಾರ ನೀಡದೇ ಹಿಂತೆಗೆದುಕೊಳ್ಳುವ ಹಕ್ಕನ್ನು ಹೊಂದಿರುತ್ತದೆ.
9. ಮಂಜೂರಾದ ಜಮೀನು ಸಂಸ್ಥೆಗೆ ಅವಶ್ಯವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂತಿರುಗಿಸತಕ್ಕದ್ದು.

10. ಮಂಜೂರಾದ ಜಮೀನಿನಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಶಾಸನಬದ್ಧವಾಗಿ ಪಡೆಯಬೇಕಾದ ಪರವಾನಗಿಗಳನ್ನು ಸಂಬಂಧಿತ ಪ್ರಾಧಿಕಾರಗಳಿಂದ ಪಡೆಯತಕ್ಕದ್ದು. ಹಾಗೂ ನಿಯಮಾನುಸಾರ ಪಾವತಿಸಬೇಕಾದ ಎಲ್ಲಾ ರೀತಿಯ ಶುಲ್ಕಗಳನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು.
11. ಮಂಜೂರಾದ ಜಮೀನು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿದ್ದು, ಸದರಿ ನಿಯಮಗಳ ಉಲ್ಲಂಘನೆಯಾದಲ್ಲಿ ಈ ಮಂಜೂರಾತಿ ಆದೇಶ ತನ್ನಷ್ಟಕ್ಕೆ ತಾನೇ ರದ್ದಾಗುವುದು ಹಾಗೂ ಯಾವುದೇ ಪರಿಹಾರ ನೀಡದೇ ಮಂಜೂರಾದ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲಾಗುವುದು.
12. ಜಿಲ್ಲಾಧಿಕಾರಿಗಳು ಮಂಜೂರಾದ ಜಮೀನನ್ನು ಫಲಾನುಭವಿಗಳಿಗೆ ಹಸ್ತಾಂತರಿಸುವಾಗ ಮಂಜೂರಾದ ಪ್ರದೇಶದ ವಾಸ್ತವ ಪರಿಸ್ಥಿತಿಗಳನ್ನು ಗಮನದಲ್ಲಿಟ್ಟುಕೊಂಡು ಪೂರಕವಾದ ಷರತ್ತುಗಳನ್ನು ವಿಧಿಸಬಹುದಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಉದಯ ಆರ್. ನಾಯಕ್**

ಪೀಠಾಧಿಕಾರಿ,

ಕಂದಾಯ ಇಲಾಖೆ (ಭೂ.ಮಂ–2).

**P.R. 872**
**S.C. 25**

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಆರ್. ಗೋವಿಂದರಾಜು, ಜಂಟಿ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಹಿಂದಿನ ಆಂತರಿಕ ಆರ್ಥಿಕ ಸಲಹೆಗಾರರು, ಲೋಕೋಪಯೋಗಿ ಇಲಾಖೆ ಅವರ ವಿರುದ್ಧ ತನಿಖೆಯನ್ನು ಸನ್ಮಾನ್ಯ ಲೋಕಾಯುಕ್ತರಿಗೆ ವಹಿಸುವ ಬಗ್ಗೆ.

**ಓದಲಾಗಿದೆ :** ಅ.ಸ. ಪತ್ರ ಸಂಖ್ಯೆ : ಲೋಇ 241 ಸೇಇವಿ 2013, ದಿನಾಂಕ : 22–08–2013 ಸರ್ಕಾರದ ಪ್ರಧಾನ ಕಾರ್ಯದರ್ಶಿ, ಲೋಕೋಪಯೋಗಿ, ಬಂದರುಗಳು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಅವರಿಂದ

**ಪ್ರಸ್ತಾವನೆ :**

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಲೋಕೋಪಯೋಗಿ ಇಲಾಖೆ ಅವರು ಮೇಲೆ ಓದಲಾದ ದಿನಾಂಕ : 22–08–2013ರ ಪತ್ರದಲ್ಲಿ ರಾಮನಗರ ಜಿಲ್ಲೆ ಲೋಕೋಪಯೋಗಿ ಇಲಾಖೆಯ ಮಾಗಡಿ ಉಪ ವಿಭಾಗದಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಅನುದಾನವನ್ನು ಉಪಯೋಗಿಸುವಲ್ಲಿ ಕಾಮಗಾರಿಗಳಿಗಾಗಿ ಟೆಂಡರ್ ಕರೆಯುವಾಗ ನಿಯಮ ಉಲ್ಲಂಘನೆ ಆದ ಕುರಿತು ವಿಚಾರಣೆ ನಡೆಸಲು ರಚಿಸಲಾದ ಕರ್ನಾಟಕ ವಿಧಾನ ಸಭೆಯ ಸದನ ಸಮಿತಿಯು ಸಲ್ಲಿಸಿದ ವರದಿಯ ಪ್ರತಿಯನ್ನು ಲಗತ್ತಿಸಿ, ಶ್ರೀ ಆರ್. ಗೋವಿಂದರಾಜು, ಹಿಂದಿನ ಆಂತರಿಕ ಆರ್ಥಿಕ ಸಲಹೆಗಾರರು ಹಾಗೂ ಪದನಿಮಿತ್ತ ವಿಶೇಷ ಕಾರ್ಯದರ್ಶಿ, ಲೋಕೋಪಯೋಗಿ ಇಲಾಖೆ ಅವರು ಸರ್ಕಾರದಿಂದ ಮಂಜೂರಾದ ಅನುದಾನವನ್ನು ಇಲಾಖೆಗೆ ತಿಳಿಸುವ ಮೂಲಕ ಬಿಡುಗಡೆ ಮಾಡುತ್ತಿದ್ದು ಈ ಕುರಿತು ಮಂಜೂರಾದ ಮೊತ್ತಕ್ಕಿಂತ ಹೆಚ್ಚುವರಿಯಾಗಿ ಅನುದಾನವನ್ನು ಬಿಡುಗಡೆ ಮಾಡಿರುವುದಲ್ಲದೆ ಕೆಲವೊಂದು ಸಂದರ್ಭದಲ್ಲಿ ಅನುದಾನವನ್ನು ನೇರವಾಗಿ ಮಾಗಡಿ ಉಪವಿಭಾಗಕ್ಕೆಂದೆ ಬಿಡುಗಡೆ ಮಾಡುವ ಮೂಲಕ ತಮ್ಮ ಅಧಿಕಾರವನ್ನು ದುರುಪಯೋಗಪಡಿಸಿಕೊಂಡು ಅಕ್ರಮವೆಸಗಿರುತ್ತಾರೆ ಎಂದು ತಿಳಿಸಿ ಅವರ ವಿರುದ್ಧ ಸಮಿತಿಯ ಶಿಫಾರಸ್ಸಿನಂತೆ ಶಿಸ್ತಿನ ಕ್ರಮ ಕೈಗೊಳ್ಳಲು ಕೋರಿದ್ದಾರೆ. ಸದನ ಸಮಿತಿಯ ಶಿಫಾರಸ್ಸನ್ನು ಪರಿಶೀಲಿಸಿದ ಸರ್ಕಾರವು ವರದಿಯ ಬಗ್ಗೆ ತನಿಖೆಯನ್ನು ಸನ್ಮಾನ್ಯ ಲೋಕಾಯುಕ್ತರಿಗೆ ವಹಿಸಲು ತೀರ್ಮಾನಿಸಿ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 237 ರಾಲೆಪ 2013, ಬೆಂಗಳೂರು, ದಿನಾಂಕ : 21–10–2014.**

ಕರ್ನಾಟಕ ಲೋಕಾಯುಕ್ತ ಕಾಯಿದೆ 1984ರ ಸೆಕ್ಷನ್ 7(2ಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿದ ಸರ್ಕಾರವು ಶ್ರೀ ಆರ್. ಗೋವಿಂದರಾಜು, ಜಂಟಿ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಅವರ ವಿರುದ್ಧ ಪ್ರಸ್ತಾವನೆಯಲ್ಲಿ ವಿವರಿಸಿದ ಆರೋಪಗಳ ಕುರಿತು ತನಿಖೆಯನ್ನು ಸನ್ಮಾನ್ಯ ಲೋಕಾಯುಕ್ತರ ಮೂಲಕ ನಡೆಯಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಈ ಕಾರಣದಿಂದಾಗಿ ಪ್ರಕರಣವನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14–ಎ ರನ್ವಯ ಸನ್ಮಾನ್ಯ ಲೋಕಾಯುಕ್ತರಿಗೆ ವಹಿಸಿದ ದಿನಾಂಕ : 13–08–2014ರ ಸರ್ಕಾರಿ ಆದೇಶ ಸಂಖ್ಯೆ : ಆಇ 237 ರಾಲೆಪ 2013ನ್ನು ರದ್ದುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್. ಲಕ್ಷ್ಮಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡ).

**P.R. 781**

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಕೆ.ಎಂ. ಗೋಪಾಲಯ್ಯ, ಪ್ರಥಮ ದರ್ಜೆ ಸಹಾಯಕರು (ನಿವೃತ್ತ), ರಾಜ್ಯ ಲೆಕ್ಕಪತ್ರ ಇಲಾಖೆ ಇವರ ವಿರುದ್ಧದ ಲಂಚದ ಆರೋಪದ ಬಗ್ಗೆ ನಡೆಸಿದ ಲೋಕಾಯುಕ್ತ ಇಲಾಖಾ ವಿಚಾರಣೆ

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ : ವಾಕೈ 178 ರೇಸೇವಿ 2002, ದಿನಾಂಕ : 28–05–2002.
2. ವಿಚಾರಣಾ ವರದಿ ಸಂಖ್ಯೆ : LOK/ARE-3/ENQ-26/2008, ದಿನಾಂಕ : 14–11–2013.
3. ಸನ್ಮಾನ್ಯ ಉಪ ಲೋಕಾಯುಕ್ತರ ಶಿಫಾರಸ್ಸು ದಿನಾಂಕ : 20–03–2014.

4. ನೋಟೀಸ್ ಸಂಖ್ಯೆ : ಆಇ 27 ರಾಲೆಪ 2014, ದಿನಾಂಕ : 02–04–2014.
5. ಕಾರಣ ಕೇಳುವ ನೋಟೀಸಿಗೆ ಆಪಾದಿತ ನೌಕರರು ನೀಡಿದ ಉತ್ತರ ದಿನಾಂಕ : 28–04–2014.
6. ಪತ್ರದ ಸಂಖ್ಯೆ : ಆಇ 27 ರಾಲೆಪ 2014, ದಿನಾಂಕ : 08–07–2014.
7. ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು ಅವರ ಪತ್ರ ಸಂಖ್ಯೆ : ಪಿಎಸ್‌ಸಿ 113 ಸಿಎನ್‌ಎಸ್ 14, ದಿನಾಂಕ : 04–08–2014.

**ಪ್ರಸ್ತಾವನೆ :**

ಶ್ರೀ ಕೆ.ಎಂ. ಗೋಪಾಲಯ್ಯ, ಪ್ರಥಮ ದರ್ಜೆ ಸಹಾಯಕರು (ನಿವೃತ್ತ), ರಾಜ್ಯ ಲೆಕ್ಕಪತ್ರ ಇಲಾಖೆ ಇವರು ಹಿಂದೆ ಕಾರ್ಯಪಾಲಕ ಅಭಿಯಂತರರ ಕಛೇರಿ, ರೇಷ್ಮೆ ಇಲಾಖೆ, ಕಬ್ಬನ್‌ಪೇಟೆ, ಬೆಂಗಳೂರು ಇಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಶ್ರೀ ಟಿ.ಆರ್. ರವಿಕುಮಾರ್, ಲೋಕೋಪಯೋಗಿ ಇಲಾಖಾ ಕಂಟ್ರಾಕ್ಟರ್‌ರವರು ನಿರ್ವಹಿಸಿದ ಕಾಮಗಾರಿ ಬಿಲ್ಲುಗಳನ್ನು ಪಾಸು ಮಾಡಲು ಅವರಿಂದ ದಿನಾಂಕ : 30–06–1998ರಂದು ರೂ. 9,000/–ಗಳ ಲಂಚ ಪಡೆಯುತ್ತಿದ್ದಾಗ ಲೋಕಾಯುಕ್ತ ಪೊಲೀಸರ ಬಲೆಗೆ ಸಿಕ್ಕಿಬಿದ್ದ ಆರೋಪಕ್ಕಾಗಿ ಅವರ ವಿರುದ್ಧ ಮೇಲೆ (1)ರಲ್ಲಿ ಓದಲಾದ ದಿನಾಂಕ : 28–05–2012ರ ಸರ್ಕಾರಿ ಆದೇಶದಲ್ಲಿ ಪೂರ್ಣ ಪ್ರಮಾಣದ ಇಲಾಖಾ ವಿಚಾರಣೆಯನ್ನು ಸನ್ಮಾನ್ಯ ಉಪಲೋಕಾಯುಕ್ತರಿಗೆ ವಹಿಸಲಾಯಿತು. ಅವರಿಂದ ವಿಚಾರಣಾಧಿಕಾರಿಯಾಗಿ ನೇಮಕಗೊಂಡ ಅಪರ ನಿಬಂಧಕರು, ವಿಚಾರಣೆಗಳು–3 ಅವರು ವಿಚಾರಣೆ ನಡೆಸಿ ಮೇಲೆ (2)ರಲ್ಲಿ ಓದಲಾದ ದಿನಾಂಕ : 14–11–2013ರ ವಿಚಾರಣಾ ವರದಿಯನ್ನು ಸನ್ಮಾನ್ಯ ಉಪ ಲೋಕಾಯುಕ್ತರಿಗೆ ಸಲ್ಲಿಸಿ ಆರೋಪ ಕುರಿತಂತೆ ಕೆಳಕಂಡ ನಿರ್ಣಯ ನೀಡಿದರು.

ಪಿರ್ಯಾದಿ ಶ್ರೀ ಟಿ.ಆರ್. ರವಿಕುಮಾರ್ ಇವರು ಪಿ.ಡಬ್ಲ್ಯೂ.ಡಿ. ಕಾಮಗಾರಿಗಳ ಗುತ್ತಿಗೆದಾರರಾಗಿದ್ದು, 1996ರಲ್ಲಿ ರೇಷ್ಮೆ ಇಲಾಖೆಗೆ ಸಂಬಂಧಪಟ್ಟ 2 ಕಾಮಗಾರಿಗಳನ್ನು ಗುತ್ತಿಗೆಗೆ ವಹಿಸಿಕೊಂಡಿದ್ದು, ಅವುಗಳನ್ನು ಬೆಂಗಳೂರು ಜಿಲ್ಲೆಯ ತಲಘಟ್ಟಪುರ ಗ್ರಾಮದಲ್ಲಿ ನಿರ್ವಹಿಸುವುದಾಗಿತ್ತು. ಇವುಗಳಲ್ಲಿ ಮೊದಲನೆ ಕಾಮಗಾರಿಯು ದಿನಾಂಕ : 20–03–1998ಕ್ಕೆ ಅಂತಿಮವಾಗಿ ಪೂರ್ಣಗೊಳಿಸಿದ್ದಾಗಿ ಮತ್ತು ಅವರಿಗೆ ಬರಬೇಕಾದ ಬಾಕಿ ಹಣವನ್ನು ಮಂಜೂರು ಮಾಡಬೇಕೆಂದು ಬಿಲ್ಲುಗಳನ್ನು ಸಲ್ಲಿಸಿದ್ದರು. ಇದನ್ನು ಅನುಸರಿಸಿ ಪಿರ್ಯಾದುದಾರರು ಕಾರ್ಯಪಾಲಕ ಅಭಿಯಂತರರ ಕಛೇರಿಗೆ ಭೇಟಿಕೊಟ್ಟು ಈ ಕಛೇರಿಯಲ್ಲಿ ಕಾಮಗಾರಿಯ ಬಿಲ್ಲುಗಳನ್ನು ಪರಿಶೀಲಿಸುವ ಆರೋಪಿ ಗೋಪಾಲಯ್ಯ, ಪ್ರ.ದ.ಸ. ಇವರನ್ನು ಕಂಡು ಕೆಲಸವನ್ನು ಶೀಘ್ರ ಮಾಡಿಕೊಡಲು ಕೋರಿರುತ್ತಾರೆ. ಆರೋಪಿಯು ಈ ಕೆಲಸಮಾಡಿಕೊಡಲು ರೂ. 15,000–00 ಲಂಚವನ್ನು ಮೊದಲು ಕೇಳಿದ್ದು, ಚೌಕಾಸಿ ಮಾಡಿದ ನಂತರ ರೂ. 12,500–00ಕ್ಕೆ ಒಪ್ಪಿಕೊಂಡಿರುತ್ತಾರೆ. ಪಿರ್ಯಾದಿಗೆ ಇಷ್ಟು ಹಣ ಕೊಟ್ಟು ಕೆಲಸ ಮಾಡಿಸಿಕೊಳ್ಳಲು ಮನಸ್ಸು ಇಲ್ಲದ ಕಾರಣ ಲೋಕಾಯುಕ್ತಕ್ಕೆ ಮೊರೆಹೋಗಿದ್ದು, ಅದರನ್ವಯ ಟ್ರ್ಯಾಪ್ ಏರ್ಪಡಿಸಲಾಗಿರುತ್ತದೆ. ಅದರಂತೆ ದಿನಾಂಕ : 30–06–1998ರಂದು ಆಪಾದಿತನ ಕಛೇರಿಗೆ ಹೋಗಿ ಅವನನ್ನು ಭೇಟಿ ಮಾಡಿದ್ದಾರೆ. ಹಣ ತಂದಿರುವುದನ್ನು ಖಚಿತಪಡಿಸಿಕೊಂಡ ಆರೋಪಿಯು ಅವರನ್ನು ಸಮೀಪದ ಚಾಲುಕ್ಯ ಹೋಟೆಲ್‌ಗೆ ಕರೆದುಕೊಂಡು ಹೋಗಿ ಅಲ್ಲಿ ಆರೋಪಿಯು ಪಿರ್ಯಾದಿಯಿಂದ ಅಪೇಕ್ಷಿಸಿದ್ದ ರೂ. 12,500–00ರಲ್ಲಿ ಪಿರ್ಯಾದಿಯು ಮೊದಲ ಕಂತಾಗಿ ಆರೋಪಿಗೆ ಕೊಟ್ಟ ರೂ. 9,000–00ಗಳನ್ನು ಪಡೆದಿದ್ದಾರೆ. ಪಿರ್ಯಾದಿಯಿಂದ ಸಿಗ್ನಲ್ ಪಡೆದ ಪೊಲೀಸರು ಹಣವನ್ನು ವಶಪಡಿಸಿಕೊಂಡಿದ್ದಾರೆ. ಲಂಚದ ಹಣವನ್ನು ಪಿರ್ಯಾದಿಯಿಂದ ಒತ್ತಾಯಿಸಿದ ಬಗ್ಗೆ ಮತ್ತು ಲಂಚದ ಹಣ ಪಡೆದ ನಂತರ ಅದನ್ನು ಎಣಿಸಿಕೊಂಡು ತನ್ನ ಪ್ಯಾಂಟ್ ಒಳ ಪ್ಯಾಕೇಟ್‌ನಲ್ಲಿ ಆರೋಪಿ ಇಟ್ಟುಕೊಂಡ ಬಗ್ಗೆ ನೆರಳು ಸಾಕ್ಷಿ ಸೋಮಶೇಖರ್ ಪ್ರಸಾದ್ ಇವರ ಹೇಳಿಕೆಯಿಂದ ಸಾಬೀತಾಗಿರುತ್ತದೆ. ಅಲ್ಲದೆ ಆರೋಪಿಯ ಎರಡೂ ಕೈ ತೊಳೆದ ದ್ರಾವಣದಲ್ಲಿ ಮತ್ತು ಲಂಚದ ಹಣ ಇಟ್ಟುಕೊಳ್ಳಲು ಆರೋಪಿಯು ಬಳಸಿದ ಪ್ಯಾಂಟ್ ಪ್ಯಾಕೇಟಿನ ದ್ರಾವಣದ ತೊಳೆತದಲ್ಲಿ ಪಿನಾಪ್ತಲೀನ ಅಂಶ ಇರುವುದನ್ನು ರಾಸಾಯನಿಕ ತಜ್ಞರು ತಮ್ಮ ವರದಿಯಲ್ಲಿ ಖಚಿತಪಡಿಸಿದ್ದು, ಇದರಿಂದಲೂ ಆರೋಪಿ ಲಂಚ ಸ್ವೀಕರಿಸಿದ ಆರೋಪವು ಸ್ಪಷ್ಟವಾಗಿರುತ್ತದೆ. ಶ್ರೀ ಸೋಮಶೇಖರ್ ಪ್ರಸಾದ್, ಶ್ರೀ ಟಿ.ಆರ್. ರವಿಪ್ರಸಾದ್ ಮತ್ತು ತನಿಖಾಧಿಕಾರಿಯಾದ ಶ್ರೀ ಎಂ.ಪಿ. ವಿದ್ಯಾಶಂಕರ ಇವರುಗಳು ಪ್ರಾಯೋಗಿಕ ಪಂಚನಾಮೆ ಮತ್ತು ಟ್ರ್ಯಾಪ್ ಮಹಜರ್‌ಗಳಿಗೆ ಪೂರ್ಣವಾಗಿ ಸಾಕ್ಷಿದಾರರಾಗಿರುತ್ತಾರೆ.

ತನಿಖೆಯ ವೇಳೆಯಲ್ಲಿ ಆರೋಪಿಯು ತನ್ನ ಬಳಿ ಇದ್ದ ಪಿರ್ಯಾದಿಗೆ ಸಂಬಂಧಿಸಿದ ಎರಡು ಕಾಮಗಾರಿಗಳ ಸಂಬಂಧದ ಕಾಗದ ಪತ್ರಗಳು, ಬಿಲ್ಲುಗಳು ಇವುಗಳನ್ನು ಹಾಜರುಪಡಿಸಿದ್ದು, ಇವುಗಳನ್ನು ಪರಿಶೀಲಿಸಿದಾಗ ಆರೋಪಿಯು ಪಿರ್ಯಾದಿಗೆ ಸಂಬಂಧಪಟ್ಟ ಕೆಲಸವನ್ನು ತನ್ನ ಬಳಿ ಇಟ್ಟು ಕೊಂಡಿದ್ದ ಎಂಬುದಕ್ಕೆ ಸಾಕ್ಷಿಯಾಗಿರುತ್ತದೆ.

ಆರೋಪಿ ಕೆ.ಎಂ. ಗೋಪಾಲಯ್ಯ ಇವರಿಗೆ ತಮ್ಮ ವಿವರಣೆಯನ್ನು ಕೊಡಲು ಅವಕಾಶಮಾಡಿಕೊಟ್ಟಿದ್ದು, ಅದರಲ್ಲಿ ಅವರು ಪಿರ್ಯಾದಿಯು ಎರಡು ಕಾಮಗಾರಿಗಳಿಗೆ ಸಂಬಂಧಪಟ್ಟ ಬಿಲ್ಲುಗಳನ್ನು ತಮ್ಮ ಕಛೇರಿಗೆ ಬಂದಿರುವ ಬಗ್ಗೆ ತಿಳಿಸಿರುತ್ತಾರೆ. ಈ ಬಿಲ್ಲುಗಳಲ್ಲಿ ಕೆಲವು ಮಾಹಿತಿಗಳ ಬಗ್ಗೆ ಕುಣಿಗಲ್ ಸಹಾಯಕ ಕಾರ್ಯಪಾಲಕ ಅಭಿಯಂತರರು ಇವರಿಂದ ಸ್ಪಷ್ಟೀಕರಣ ಬರಬೇಕಿತ್ತೆಂದು ಅವಕ್ಕಾಗಿ ತಮ್ಮಲ್ಲಿ ಬಿಲ್ಲುಗಳನ್ನು ಇರಿಸಿಕೊಂಡಿದ್ದಾಗಿಯೂ ತಿಳಿಸಿರುತ್ತಾರೆ.

ಆರೋಪಿಯ ಈ ಹೇಳಿಕೆಗಳು ಈ ಕೆಳಕಂಡ ಅಂಶಗಳ ಹಿನ್ನೆಲೆಯಲ್ಲಿ ಸಮರ್ಥನೀಯ ಎನಿಸುವುದಿಲ್ಲ.

ಗುತ್ತಿಗೆದಾರರು ತಮಗೆ ವಹಿಸಿದ್ದ ಕಾಮಗಾರಿಗಳನ್ನು ವಿಳಂಬವಾಗಿ ಮುಗಿಸಿಕೊಟ್ಟಿದ್ದರೂ ಕಾರ್ಯಪಾಲಕ ಅಭಿಯಂತರರಿಗೆ ಈ ವಿಳಂಬದ ಅವಧಿಯನ್ನು ಮನ್ನಾ ಮಾಡುವ ಅಥವಾ ವಿಳಂಬಕ್ಕೆ ಗುತ್ತಿಗೆದಾರರು ತೆರಬೇಕಾಗಿದ್ದ ದಂಡವನ್ನು ಕಡಿಮೆ ಮಾಡುವ ಅಧಿಕಾರವನ್ನು ಹೊಂದಿರುವ ವಿಷಯವನ್ನು ಗಮನದಲ್ಲಿರಿಸಿಕೊಂಡು ಈ ಪರಿಸ್ಥಿತಿಯ ಲಾಭ ಪಡೆಯುವ ಉದ್ದೇಶದಿಂದಲೇ ಗುತ್ತಿಗೆದಾರರ ಬಿಲ್ಲುಗಳನ್ನು ವಿನಾಕಾರಣ ತಮ್ಮಲ್ಲಿ ಇಟ್ಟುಕೊಂಡಿರುವುದು ತನಿಖೆಯಿಂದ ಸಾಬೀತಾಗಿರುತ್ತದೆ. ಹಾಗಿಲ್ಲದಿದ್ದಲ್ಲಿ ಮಾರ್ಚ್–31ನೇ ತಾರೀಖಿಗೆ ಆರೋಪಿಯು ಪಿರ್ಯಾದಿಗೆ ಸಂಬಂಧಿಸಿದ ಬಿಲ್ಲುಗಳನ್ನು ಸ್ವೀಕರಿಸಿರುವುದು ಮತ್ತು ಟ್ರ್ಯಾಪ್ ನಡೆದ ದಿನದವರೆಗೆ ಅಂದರೆ **30–06–1998ರವರೆಗೆ** ಈ ವಿಷಯವನ್ನು ಆರೋಪಿಯು ತಮ್ಮ ಮೇಲಾಧಿಕಾರಿಗಳ ಗಮನಕ್ಕೆ ತಂದಿರುವ ಬಗ್ಗೆ ಯಾವುದೇ ಕಛೇರಿ ದಾಖಲಾತಿಗಳು ಇರುವುದಿಲ್ಲ. ಅಲ್ಲದೆ ಮೇಲಾಧಿಕಾರಿಗಳು ಈ ಬಗ್ಗೆ ತಮ್ಮ ಹೇಳಿಕೆಯಲ್ಲಿ ನುಡಿದಿರುವುದಿಲ್ಲ.

ಆರೋಪಿಯು ತಾನು ಕೊಟ್ಟಿರುವ ಹೇಳಿಕೆಯಲ್ಲಿ, ಫಿರ್ಯಾದಿಯು ತನಗೆ ವಹಿಸಿದ ಕಾಮಗಾರಿಯನ್ನು ವಿಳಂಬವಾಗಿ ಮುಗಿಸಿದ್ದರಿಂದ ದಂಡ ತೆರಬೇಕೆನ್ನುವ ಹೆದರಿಕೆಯಿಂದ ತನಗೆ ಬಲವಂತಮಾಡಿ ಲಂಚದ ಹಣವನ್ನು ಕೊಟ್ಟಿರುವ ಬಗ್ಗೆ ತಿಳಿಸಿರುತ್ತಾರೆ.

ಆರೋಪಿಯು ಲಂಚದ ಹಣವನ್ನು ತಂದಿದ್ದೀರಾ ಎಂದು ಪಿರ್ಯಾದಿಯನ್ನು ಕೇಳಿದ ಬಗ್ಗೆ ಮತ್ತು ಆ ಹಣವನ್ನು ಹೋಟೆಲ್‌ನಲ್ಲಿ ಮತ್ತೊಮ್ಮೆ ಕೇಳಿ ಪಡೆದ ಬಗ್ಗೆ ಹಾಗೂ ಲಂಚದ ಹಣ ಪಡೆದ ನಂತರ ತನ್ನ ಪ್ಯಾಂಟಿನ ಒಳ ಪ್ಯಾಕೆಟಿನಲ್ಲಿ ಇಟ್ಟುಕೊಂಡ ಬಗ್ಗೆ ನೆರಳು ಸಾಕ್ಷಿ ದೃಢಪಡಿಸಿದ್ದಾರೆ. ಎಲ್ಲಾ ಸಾಕ್ಷಿಗಳ ಹೇಳಿಕೆಯ ಒಂದಕ್ಕೊಂದು ತಾಳೆ ಆಗುತ್ತಿದ್ದು, ಆರೋಪವು ಸಾಭೀತಾಗಿದೆ.

ಸನ್ಮಾನ್ಯ ಉಪ ಲೋಕಾಯುಕ್ತರು ಈ ವಿಚಾರಣಾ ವರದಿಯನ್ನು ಪರಾಮರ್ಶಿಸಿ ಮೇಲೆ (3)ರಲ್ಲಿ ಓದಲಾದ ದಿನಾಂಕ : 28–11–2013ರ ಶಿಫಾರಸ್ಸು ನೀಡಿದರು. ತದನಂತರ ಸದರಿ ಆಪಾದಿತ ನೌಕರರಿಗೆ ವಿಚಾರಣಾ ವರದಿ ಹಾಗೂ ಸನ್ಮಾನ್ಯ ಉಪ ಲೋಕಾಯುಕ್ತರ ಶಿಫಾರಸ್ಸಿನೊಂದಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214ರನ್ವಯ ಮೇಲೆ (4)ರಲ್ಲಿ ಓದಲಾದ ದಿನಾಂಕ : 02–04–2014ರ ನೋಟೀಸ್ ಜಾರಿ ಮಾಡಿ ವಿಚಾರಣಾ ವರದಿ ಹಾಗೂ ಸನ್ಮಾನ್ಯ ಉಪಲೋಕಾಯುಕ್ತರ ಶಿಫಾರಸ್ಸು ಕುರಿತು ಅಭಿಪ್ರಾಯ/ಅಹವಾಲು ಸಲ್ಲಿಸುವಂತೆ ತಿಳಿಸಲಾಗಿತ್ತು. ಶ್ರೀ ಕೆ.ಎಂ. ಗೋಪಾಲಯ್ಯ ಇವರು ಮೇಲೆ (5)ರಲ್ಲಿ ಓದಲಾದ ದಿನಾಂಕ : 28–04–2014ರ ಉತ್ತರ ನೀಡಿ ತಮ್ಮ ಮೇಲಿನ ಆರೋಪ ಕುರಿತಂತೆ ಲೋಕಾಯುಕ್ತ ಪೊಲೀಸರು ಕ್ರಿಮಿನಲ್ ಮೊಕದ್ದಮೆ ಹೂಡಿ, ಸದರಿ ಪ್ರಕರಣವು ವಿಶೇಷ ಸಿ.ಸಿ.ನಂ. 90/99ರಲ್ಲಿ ವಿಶೇಷ ನ್ಯಾಯಾಧೀಶರು ಬೆಂಗಳೂರು ನಗರ ಮತ್ತು ಗ್ರಾಮೀಣ ಜಿಲ್ಲೆ ಇವರು ನ್ಯಾಯಾಲಯವು ದಿನಾಂಕ :27–11–2002ರಂದು ನೀಡಿದ ತೀರ್ಪಿನಲ್ಲಿ ತಮ್ಮನ್ನು ಖುಲಾಸೆಗೊಳಿಸಿದ್ದು ಈ ಆದೇಶದ ವಿರುದ್ಧ ಲೋಕಾಯುಕ್ತ ಪೊಲೀಸರು ಉಚ್ಚ ನ್ಯಾಯಾಲಯದಲ್ಲಿ ಕ್ರಿಮಿನಲ್ ಅಪೀಲು ಸಂಖ್ಯೆ : 747/2003 ಅನ್ನು ದಾಖಲಿಸಲಾಗಿ ಉಚ್ಚನ್ಯಾಯಾಲಯವು ದಿನಾಂಕ : 11–12–2008 ರಂದು ಅದನ್ನು ವಜಾ ಮಾಡಿದೆ. ಈ ಪ್ರಕರಣ 1998ರಲ್ಲಿ ದಾಖಲಾಗಿದ್ದು, 16 ವರ್ಷಗಳು ಕಳೆದಿವೆ, ತಾವು ಜೂನ್ 2013ರಂದು ನಿವೃತ್ತಿ ಹೊಂದಿರುತ್ತಿದ್ದು ತಮ್ಮಿಂದ ಯಾವುದೇ ಆರ್ಥಿಕ ನಷ್ಟವಾಗಿಲ್ಲ. ತಾವು ಆರೋಪದಿಂದ ಖುಲಾಸೆಗೊಂಡಿರುವುದರಿಂದ 16 ವರ್ಷಗಳ ನಂತರ ಕ್ರಮ ಜರುಗಿಸುವ ಹಾಗಿಲ್ಲವೆಂದು ತಿಳಿಸಿ, ಮಾನ್ಯ ಉಚ್ಚನ್ಯಾಯಾಲಯ ಹಾಗೂ ಸರ್ವೋಚ್ಚ ನ್ಯಾಯಾಲಯವು ಕೆಲವು ಇಂತಹುದೇ ಪ್ರಕರಣಗಳಲ್ಲಿ ನೀಡಿದ ತೀರ್ಪುಗಳನ್ನು ಉದಾಹರಿಸಿ ತಮ್ಮ ಮೇಲಿನ ಆರೋಪವನ್ನು ಕೈಬಿಡುವಂತೆ ಕೋರಿರುತ್ತಾರೆ.

ಸಿಆಸು ಇಲಾಖೆಯು ಹೊರಡಿಸಿದ ಸುತ್ತೋಲೆ ಸಂಖ್ಯೆ : ಸಿಆಸುಇ 5 ಸೇಇವಿ 96, ದಿನಾಂಕ : 02–12–97 ರ ಸರ್ಕಾರಿ ನೌಕರರ ಮೇಲೆ ನ್ಯಾಯಾಲಯಗಳಲ್ಲಿ ಕ್ರಿಮಿನಲ್ ಮೊಕದ್ದಮೆ ಬಾಕಿ ಇದ್ದಾಗ ಅದೇ ಆರೋಪಗಳ ಮೇಲೆ ಶಿಸ್ತಿನ ಕ್ರಮ/ಇಲಾಖಾ ವಿಚಾರಣೆಯನ್ನು ನಡೆಸುವ ಬಗ್ಗೆ ಸ್ಪಷ್ಟೀಕರಣವನ್ನು ನೀಡಿರುತ್ತಾರೆ. ನ್ಯಾಯಾಲಯದಲ್ಲಿ ಹೂಡುವ ಪ್ರಕ್ರಿಯೆ ಹಾಗೂ ಇಲಾಖಾ ವಿಚಾರಣೆಯಲ್ಲಿ ಹೂಡುವ ಪ್ರಕ್ರಿಯೆ ಬೇರೆ ಬೇರೆ ಪ್ರಕ್ರಿಯೆಗಳಾಗಿದ್ದು, ಸರ್ಕಾರಿ ನೌಕರರ ಮೇಲೆ ನ್ಯಾಯಾಲಯಗಳಲ್ಲಿ ಕ್ರಿಮಿನಲ್ ಮೊಕದ್ದಮೆ ಬಾಕಿ ಇದ್ದಾಗ ಅದೇ ಆರೋಪಗಳ ಬಗ್ಗೆ ಶಿಸ್ತಿನ ಕ್ರಮವನ್ನು ನಡೆಸಬಹುದಾಗಿದೆಯೆಂದು ತಿಳಿಸಿ ಸರ್ವೋನ್ನತ ನ್ಯಾಯಾಲಯವು, ರಾಜಸ್ಥಾನ್ ಸರ್ಕಾರದ ವಿರುದ್ಧ ಬಿ.ಕೆ. ಮೀನಾ ಮತ್ತು ಇತರರು (1996)6 ಸುಪ್ರೀಂ ಕೋರ್ಟ್ ಕೇಸಸ್ 417, ಪ್ರಕರಣದಲ್ಲಿ ನೀಡಿದ ತೀರ್ಮಾನವನ್ನು ಉಲ್ಲೇಖಿಸಿ ಅದರಂತೆ ಕ್ರಮ ಕೈಗೊಳ್ಳಲು ತಿಳಿಸಲಾಗಿದೆ. ಅದರಂತೆ ಈ ವಿಚಾರಣೆಯನ್ನು ಹೂಡಲಾಗಿದೆ.

ಆದ್ದರಿಂದ ಶ್ರೀ ಕೆ.ಎಂ. ಗೋಪಾಲಯ್ಯ, ನಿವೃತ್ತ ಪ್ರಥಮ ದರ್ಜೆ ಸಹಾಯಕರ ಉತ್ತರವನ್ನು ಒಪ್ಪಿಕೊಳ್ಳದೇ ಆರೋಪ ಸಾಬೀತಾಗಿದೆ ಎಂಬ ವಿಚಾರಣಾ ವರದಿ ಹಾಗೂ ಸನ್ಮಾನ್ಯ ಉಪ ಲೋಕಾಯುಕ್ತರ ಶಿಫಾರಸ್ಸನ್ನು ಒಪ್ಪಿಕೊಂಡ ಸರ್ಕಾರವು ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯೊಡನೆ ದಂಡನೆ ವಿಧಿಸಲು ನಿರ್ಣಯಿಸಿ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 27 ರಾಲೆಪ 2014, ಬೆಂಗಳೂರು, ದಿನಾಂಕ : 21–10–2014.**

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214(1)(ಎ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಕೆ.ಎಂ. ಗೋಪಾಲಯ್ಯ, ನಿವೃತ್ತ ಪ್ರಥಮ ದರ್ಜೆ ಸಹಾಯಕರು, ರಾಜ್ಯ ಲೆಕ್ಕಪತ್ರ ಇಲಾಖೆ ಅವರ ಮಾಸಿಕ ಪಿಂಚಣಿಯ ಶೇಕಡ 50 ರಷ್ಟು ಮೊತ್ತವನ್ನು ಶಾಶ್ವತವಾಗಿ ಕಡಿತಗೊಳಿಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

P.R. 782

ಎನ್. ಲಕ್ಷ್ಮಣ

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಆಡಳಿತ & ಮುಂಗಡ).

## ಆರ್ಥಿಕ ಸಚಿವಾಲಯ

**ವಿಷಯ :** ಖಜಾನೆ ಇಲಾಖೆಯ "ಜಿಲ್ಲಾ ಖಜಾನಾಧಿಕಾರಿ" ಹಾಗೂ "ಸಹಾಯಕ ಖಜಾನಾಧಿಕಾರಿ" ಹುದ್ದೆಗಳ ಪದನಾಮಗಳನ್ನು "ಸಹಾಯಕ ನಿರ್ದೇಶಕರು" ಹಾಗೂ "ಖಜಾನೆ ಅಧಿಕಾರಿ" ಎಂದು ಮರು ಪದನಾಮೀಕರಿಸುವ ಬಗ್ಗೆ.

**ಓದಲಾಗಿದೆ :** ನಿರ್ದೇಶಕರು, ಖಜಾನೆ ಇಲಾಖೆ ಇವರ ಪತ್ರ ಸಂಖ್ಯೆ : ಖನಿ/ಸಿಬ್ಬಂದಿ–(4)/ಸಿಆರ್50/2008–09, ದಿನಾಂಕ : 23–09–2014.

**ಪ್ರಸ್ತಾವನೆ :**

ಕರ್ನಾಟಕ ಜನರಲ್ ಸರ್ವೀಸ್ಸ್ (ಟ್ರೆಜರಿ ಬ್ರಾಂಚ್) (ರೆಕ್ರ್ಯೂಟ್‌ಮೆಂಟ್) ನಿಯಮಗಳು 1994 ಪರಿಷ್ಕರಣೆ ಪ್ರಕ್ರಿಯೆ ಜಾರಿಯಲ್ಲಿರುತ್ತದೆ. ಈ ಸಂಬಂಧ ನಿರ್ದೇಶಕರು, ಖಜಾನೆ ಇಲಾಖೆ, ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ ಖಜಾನೆ ಇಲಾಖೆಯ "ಜಿಲ್ಲಾ ಖಜಾನಾಧಿಕಾರಿ ಹುದ್ದೆಯ ಪದನಾಮವನ್ನು "ಸಹಾಯಕ ನಿರ್ದೇಶಕರು" ಹಾಗೂ ಸಹಾಯಕ ಖಜಾನಾಧಿಕಾರಿ ಹುದ್ದೆಯ ಪದನಾಮವನ್ನು "ಖಜಾನೆ ಅಧಿಕಾರಿ" ಎಂದು ಮರುಪದನಾಮೀಕರಿಸಿ ಆದೇಶಿಸುವಂತೆ ಕೋರಿರುತ್ತಾರೆ.

ಆಡಳಿತದ ಹಿತದೃಷ್ಟಿಯಿಂದ ಈ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 48 ಆಖಇ 2007(ಭಾ–2), ಬೆಂಗಳೂರು, ದಿನಾಂಕ : 25–10–2014.**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಖಜಾನೆ ಇಲಾಖೆಯ "ಜಿಲ್ಲಾ ಖಜಾನಾಧಿಕಾರಿ" ಹುದ್ದೆಯ ಪದನಾಮವನ್ನು "ಸಹಾಯಕ ನಿರ್ದೇಶಕರು" ಎಂದು ಹಾಗೂ ಸಹಾಯಕ ಖಜಾನಾಧಿಕಾರಿ ಹುದ್ದೆಯ ಪದನಾಮವನ್ನು "ಖಜಾನೆ ಅಧಿಕಾರಿ" ಎಂದು ಮರು ಪದನಾಮಗೊಳಿಸಲು ಆದೇಶಿಸಿದೆ.

2. ಸಂಬಂಧಪಟ್ಟ ಕರ್ನಾಟಕ ಖಜಾನೆ ಕೋಡ್ ಮತ್ತು ಇತರ ಸಂಬಂಧಪಟ್ಟ ನಿಯಮಾವಳಿಗೆ ಅಗತ್ಯ ತಿದ್ದುಪಡಿಯನ್ನು ಸಂಬಂಧಪಟ್ಟ ಇಲಾಖೆಗಳು/ವಿಭಾಗಗಳು ಹೊರಡಿಸಲು ಪ್ರತ್ಯೇಕವಾಗಿ ಕ್ರಮ ಸಹ ವಹಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**P.R. 783**

ಎನ್. ಲಕ್ಷ್ಮಣ

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಆಡಳಿತ & ಮುಂಗಡ).

## ಆರ್ಥಿಕ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರಿ ವಿಮಾ ಇಲಾಖೆಯಲ್ಲಿ ವಿಮೆಗೆ ಒಳಪಟ್ಟ ವಾಹನಗಳು ಅಪಘಾತಕ್ಕೀಡಾದಾಗ ಸರ್ವೇಯರ್‌ರವರು ಕೈಗೊಳ್ಳುವ ಸರ್ವೆ ಕಾರ್ಯಕ್ಕೆ ಪಾವತಿಸುವ ಸರ್ವೆ ಫೀಯನ್ನು ಪರಿಷ್ಕರಿಸುವ ಕುರಿತು.

**ಓದಲಾಗಿದೆ :**

1. ಸರ್ಕಾರಿ ಆದೇಶ ಸಂಖ್ಯೆ : ಆಇ 86 ಕವಿಇ 2005, ದಿನಾಂಕ : 22–08–2007.
2. ನಿರ್ದೇಶಕರು, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ ಇವರ ಪತ್ರ ಸಂಖ್ಯೆ : ವಾವಿ1/ಎನ್‌ಎಬಿ/3194/13–14, ದಿನಾಂಕ : 24–01–2014, ಸಂಖ್ಯೆ : ವಾವಿ1/ಎನ್‌ಎಬಿ/3446/13–14, ದಿನಾಂಕ :15–02–2014, ಸಂಖ್ಯೆ : ವಾವಿ1/ಎನ್‌ಎಬಿ/845/14–15, ದಿನಾಂಕ : 04–07–2014, ಸಂಖ್ಯೆ : ವಾವಿ1/ಎನ್‌ಎಬಿ/1535/14–15, ದಿನಾಂಕ : 08–09–2014 ಮತ್ತು ಸಂಖ್ಯೆ : ವಾವಿ1/ಎನ್‌ಎಬಿ/1784/14–15, ದಿನಾಂಕ : 26–09–2014

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರ.ಸಂ. (1)ರ ಸರ್ಕಾರಿ ಆದೇಶದಲ್ಲಿ ಸರ್ವೆಯರ್ ಸರ್ವೆ ಫೀಯನ್ನು ಮತ್ತು ಇತರ ಭತ್ಯೆಗಳ ದರವನ್ನು ಪರಿಷ್ಕರಿಸಲಾಗಿದೆ.

ಮೇಲೆ ಕ್ರ.ಸಂ. (2)ರಲ್ಲಿ ಓದಲಾದ ಪತ್ರಗಳಲ್ಲಿ ನಿರ್ದೇಶಕರು, ಕರ್ನಾಟಕ ಸರ್ಕಾರಿ ವಿಮಾ ಇಲಾಖೆ ಇವರು ಕರ್ನಾಟಕ ಸರ್ಕಾರಿ ವಿಮಾ ಇಲಾಖೆಯಲ್ಲಿ ವಿಮೆಗೆ ಒಳಪಟ್ಟ ವಾಹನಗಳು ಅಪಘಾತಕ್ಕೀಡಾದಾಗ ಸರ್ವೆ ಕಾರ್ಯವನ್ನು ಇಲಾಖೆಯ ಪ್ಯಾನಲ್‌ನಲ್ಲಿರುವ ಸರ್ವೆಯರ್‌ಗಳು ಕೈಗೊಳ್ಳುತ್ತಾ ಬಂದಿರುತ್ತಾರೆಂದು ಹಾಗೂ ಇವರಿಗೆ ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ನಿಗದಿಪಡಿಸಿದ ಸರ್ವೆ ಶುಲ್ಕವನ್ನು ಪಾವತಿ ಮಾಡಲಾಗುತ್ತಿದೆಯೆಂದು ತಿಳಿಸಿ, ದಿನಾಂಕ : 14–03–2013ರಂದು ಜನರಲ್ ಇನ್ಸೂರೆನ್ಸ್ (ಪಬ್ಲಿಕ್ ಸೆಕ್ಟರ್) ಅಸೋಸಿಯೇಷನ್ ಆಫ್ ಇಂಡಿಯಾ, ನ್ಯೂಡೆಲ್ಲಿ, ಇವರು ಹೊರಡಿಸಿರುವ ಪರಿಷ್ಕೃತ ಆದೇಶದಂತೆ ದಿನಾಂಕ : 01–04–2013 ರಿಂದ ಅನುಮೋದನೆಗೊಂಡ ಸರ್ವೆ ಫೀಯನ್ನು ಪಾವತಿಸುವಂತೆ ಕೋರಿ ಸಲ್ಲಿಸಿರುವ ಪ್ರಸ್ತಾವನೆಗೆ ಅನುಮೋದನೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 24 ಕವಿಇ 2014, ಬೆಂಗಳೂರು, ದಿನಾಂಕ : 14ನೇ ಅಕ್ಟೋಬರ್, 2014.**

ಪ್ರಸ್ತಾವನೆಯಲ್ಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿ, ಸರ್ಕಾರವು ಸರ್ವೆಯರ್ಸ್ ಸರ್ವೆ–ಫೀ ಮತ್ತು ಇತರೆ ಭತ್ಯೆಗಳನ್ನು ಈ ಆದೇಶದೊಂದಿಗೆ ಲಗತ್ತಿಸಿರುವ ಅನುಬಂಧದಲ್ಲಿ ನಮೂದಿಸಿದಂತೆ ಪರಿಷ್ಕರಿಸಿ ಆದೇಶಿಸಿದೆ. ಈ ದರ ಪರಿಷ್ಕರಣೆಯು ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಎನ್. ಲಕ್ಷ್ಮಣ

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ, (ಆಡಳಿತ & ಮುಂಗಡ).

### ಅನುಬಂಧ

**(ಸರ್ಕಾರಿ ಆದೇಶ ಸಂಖ್ಯೆ : ಆಇ 24 ಕವಿಇ 2014, ದಿನಾಂಕ : 14ನೇ ಅಕ್ಟೋಬರ್, 2014)**

| **(I) ಕ್ಲೇಮಿನ ನಿರ್ಧಾರಿತ ಅಂದಾಜು (ರೂ.ಗಳಲ್ಲಿ)** | **ಪಾವತಿ ಮಾಡಬೇಕಾದ ವೃತ್ತಿ ಫೀ** |
|---|---|
| (1) 20,000/–ರವರೆಗೆ | 750/– |
| (2) 20,000/– ರಿಂದ 50,000/– ರವರೆಗೆ | 1,100/– |
| (3) 50,000/– ರಿಂದ 1,00,000/–ರವರೆಗೆ | 1,300/– |
| (4) 1,00,000/– ರಿಂದ 2,00,000/– ವರೆಗೆ | 2,000/– |
| (5) 2,00,000/– ಮೇಲ್ಪಟ್ಟು | 2,000+0.65% on balance above 2,00,000/– subject to maximum of Rs. 10,000/– |
| **(II) ಸ್ಥಳ ಪರಿಶೀಲನೆ ಮತ್ತು ಮಾಪನ (ಸ್ಪಾಟ್ ಸರ್ವೆ)** | |
| (1) 80 ಕಿ.ಮೀ. ರವರೆಗೆ (ಒಂದು ಕಡೆ) | 750/– |

| | |
|---|---|
| (2) 80 ಕಿ.ಮೀ. ಮೀರಿದ ಸರ್ವೆಗೆ | 1,000/– |
| (3) ಸಾಮಾನ್ಯ ಕೆಲಸದ ಸ್ಥಳದಿಂದ ಹೊರಗಿನ ಸಮೀಕ್ಷೆ ಅವಧಿಯಲ್ಲಿ ರಾತ್ರಿ ಉಳಿಯುವುದಾದರೆ | ಮೇಲೆ ನಮೂದಿಸಿದ ಶ್ರೇಣಿಯಲ್ಲಿ ಫೀ ಶೇ. 150 ರಂತೆ ಲೆಕ್ಕ ಮಾಡಿ ಮೊತ್ತವನ್ನು ನಿರ್ಧರಿಸುವರು. |

ಟಿಪ್ಪಣಿ : ಸರ್ವೆಯರ್‌ನವರು ಕೊಟ್ಟಿರುವ ರಿಪೇರಿ ವರದಿಯ ಆಧಾರದ ಮೇಲೆ ಸರಿಪಡಿಸುವ ಅಂದಾಜಿನ ರಿಪೇರಿಯ ಸರ್ವೆಯರ್‌ರು ನಿರ್ಧರಿಸಿದಂತೆ ವೃತ್ತೀ ಫೀ ಯನ್ನು ನಿರ್ಧರಿಸುವುದು.

| | |
|---|---|
| **(III) ಸ್ಥಳೀಯ ಸಾಗಣೆ (ಲೋಕಲ್ ಕನ್ವೆಯನ್ಸ್)** | |
| **ಸ್ಥಳೀಯ ಸರ್ವೆಗಳಿಗೆ ಮಾತ್ರ ಅನ್ವಯಿಸುತ್ತದೆ.** | ಎ. ವಿಧಾನ ನಗರಗಳಿಗೆ 500/– ಬೇರೆ ಸ್ಥಳಗಳಿಗೆ 300/– |
| **(IV) ಪ್ರಯಾಣ ವೆಚ್ಚಗಳು** | ರೋಡ್ ಮೂಲಕ ಸ್ವಂತ ವಾಹನದಲ್ಲಿ 350 ಕಿ.ಮೀ.ವರೆಗೆ ಪ್ರಯಾಣಿಸಿದರೆ ಪ್ರತಿ ಕಿ.ಮೀ.ಗೆ 15% ರಂತೆ ಸ್ಥಳೀಯ ಪೆಟ್ರೋಲ್ ದರದಂತೆ ವಾಸ್ತವಿಕವಾಗಿ ಪ್ರಯಾಣ ಕೈಗೊಂಡ ಕಿ.ಮೀ.ಗೆ ಲೆಕ್ಕಾಚಾರ ಮಾಡಿಕೊಡುವುದು. |
| (V) ತಂಗು ಭತ್ಯೆಗಳು | |
| ಎ–ದರ್ಜೆ ನಗರಗಳಿಗೆ | 750/– |
| ಬಿ–ದರ್ಜೆ ನಗರಗಳಿಗೆ | 600/– |
| ಸಿ–ದರ್ಜೆ ನಗರಗಳಿಗೆ | 500/– |
| ಟಿಪ್ಪಣಿ : 1) ಪ್ರತಿ 24 ಗಂಟೆಗಳ ಯುನಿಟ್‌ಗೆ | ಪೂರ್ಣ ಭತ್ಯೆ ಒಂದು ದಿನದ ತಂಗುವಿಕೆಗೆ |
| 2) 12 ಗಂಟೆಗಿಂತ ಹೆಚ್ಚಿಗೆ | ಪೂರ್ಣ ಭತ್ಯೆ ಒಂದು ದಿನದ ತಂಗುವಿಕೆಗೆ 24 ಗಂಟೆಗಳ ಯುನಿಟ್ ಲೆಕ್ಕದಲ್ಲಿ |
| 3) 6 ಗಂಟೆಗಿಂತ ಮೇಲ್ಪಟ್ಟು 12 ಗಂಟೆಗಳೊಳಗೆ | 50% ರಷ್ಟು ಮೊತ್ತವನ್ನು 24 ಗಂಟೆಗಳ ಒಂದು ಯುನಿಟ್‌ಗೆ |
| 4) 6 ಗಂಟೆಗಿಂತ ಮೀರದಂತೆ | 30% ರಷ್ಟು ಮೊತ್ತವನ್ನು 24 ಗಂಟೆಗಳ ಒಂದು ಯುನಿಟ್‌ಗೆ |
| (VI) ಫೋಟೋಗ್ರಾಫರ್ ವೆಚ್ಚಗಳು | ಪ್ರತಿ ಫೋಟೋಗೆ ರೂ. 10/– ರಂತೆ ಗರಿಷ್ಠ ರೂ. 200/– ರಂತೆ ಪ್ರತಿ ಅಪಘಾತಕ್ಕೆ ಗರಿಷ್ಠ ಮಿತಿ. |
| (VII) ಪುನರ್ ಪರಿಶೀಲನಾ ಸರ್ವೆ–ಫೀ (ರಿ–ಸರ್ವೆ ಚಾರ್ಜಸ್) | 1) 80 ಕಿ.ಮೀ.ವರೆಗೆ 750/–<br>2) 80 ಕಿ.ಮೀ. ಮೇಲ್ಪಟ್ಟು 1,000/– |
| (VIII) ವಾಹನದ ಮೌಲ್ಯವನ್ನು ನಿಗದಿಪಡಿಸುವ ಬಗ್ಗೆ | ರೂ. 750/– ಗರಿಷ್ಠ |

**ಎನ್. ಲಕ್ಷ್ಮಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ & ಮುಂಗಡ).

**P.R. 784**

## ಆರ್ಥಿಕ ಸಚಿವಾಲಯ

**ವಿಷಯ :** ಯುಜಿಸಿ/ಐಸಿಎಆರ್/ಎಐಸಿಟಿಇ ವೇತನ ಶ್ರೇಣಿಗಳಲ್ಲಿ ವೇತನ ಪಡೆಯುತ್ತಿರುವ ಬೋಧಕ ವರ್ಗದವರಿಗೆ ಮತ್ತು ಎನ್‌ಜೆಪಿಸಿ ವೇತನ ಶ್ರೇಣಿಯಲ್ಲಿರುವ ನ್ಯಾಯಾಂಗ ಅಧಿಕಾರಿಗಳಿಗೆ/ನಿವೃತ್ತಿ ವೇತನದಾರರಿಗೆ ತುಟ್ಟಿ ಭತ್ಯೆಯನ್ನು ಮಂಜೂರು ಮಾಡುವ ಕುರಿತು.

**ಓದಲಾಗಿದೆ :**
1. ಸ.ಅ. ಸಂಖ್ಯೆ : ಎಫ್‌ಡಿ 10 ಎಸ್‌ಆರ್‌ಪಿ 2013, ದಿನಾಂಕ : 20–05–2013.
2. ಸ.ಅ. ಸಂಖ್ಯೆ : ಎಫ್‌ಡಿ 12 ಎಸ್‌ಆರ್‌ಪಿ 2013(11), ದಿನಾಂಕ : 12–06–2013
3. ಸ.ಅ. ಸಂಖ್ಯೆ : ಎಫ್‌ಡಿ 22 ಎಸ್‌ಆರ್‌ಪಿ 2013, ದಿನಾಂಕ : 10–10–2013.
4. ಸ.ಅ. ಸಂಖ್ಯೆ ; ಎಫ್‌ಡಿ 7 ಎಸ್‌ಆರ್‌ಪಿ 2014, ದಿನಾಂಕ : 11–04–2014.

**ಸರ್ಕಾರಿ ಆದೇಶ ಸಂಖ್ಯೆ : ಆಇ 18 ಎಸ್‌ಆರ್‌ಪಿ 2014, ಬೆಂಗಳೂರು, ದಿನಾಂಕ : 1ನೇ ಅಕ್ಟೋಬರ್ 2014**

**ಪ್ರಸ್ತಾವನೆ :**

ಯುಜಿಸಿ/ಎಐಸಿಟಿಇ/ಐಸಿಎಆರ್ ವೇತನ ಶ್ರೇಣಿಗಳಲ್ಲಿರುವ ಬೋಧಕ ಸಿಬ್ಬಂದಿಗಳಿಗೆ ಮತ್ತು ಎನ್‌ಜೆಪಿಸಿ ವೇತನ ಶ್ರೇಣಿಯಲ್ಲಿರುವ ನ್ಯಾಯಾಂಗ ಅಧಿಕಾರಿಗಳಿಗೆ ಹಾಲಿ ಲಭ್ಯವಿರುವ ತುಟ್ಟಿಭತ್ಯೆಯ ದರವನ್ನು ಮೂಲ ವೇತನದ ಶೇ. 100 ರಿಂದ ಶೇ 107 ಕ್ಕೆ ಹೆಚ್ಚಿಸಿ ದಿನಾಂಕ : **1ನೇ ಜುಲೈ 2014** ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಲು ಸರ್ಕಾರವು ಹರ್ಷಿಸುತ್ತದೆ.

2. ಈ ಆದೇಶದ ಉದ್ದೇಶಗಳಿಗಾಗಿ "ಮೂಲ ವೇತನ" ಎಂದರೆ ಸರ್ಕಾರಿ ನೌಕರನು ಧಾರಣ ಮಾಡಿರುವ ಹುದ್ದೆಗೆ ಅನ್ವಯವಾಗುವ ಯುಜಿಸಿ/ಐಸಿಎಆರ್/ಎಐಸಿಟಿಇ ಮತ್ತು ಎನ್‌ಜೆಪಿಸಿ ವೇತನ ಶ್ರೇಣಿಗಳಲ್ಲಿ ಪಡೆಯುವ ವೇತನ.

3. ಮೂಲ ವೇತನಕ್ಕೆ ಇನ್ಯಾವುದೇ ಉಪಲಬ್ದಗಳನ್ನು ಸೇರಿಸತಕ್ಕದ್ದಲ್ಲ.

4. ಎನ್‌ಜೆಪಿಸಿ ನಿವೃತ್ತಿ ವೇತನದಾರರು/ಕುಟುಂಬ ನಿವೃತ್ತಿ ವೇತನದಾರರಿಗೆ ಹಾಲಿ ಲಭ್ಯವಿರುವ ತುಟ್ಟಿಭತ್ಯೆಯ ದರವನ್ನು ಮೂಲ ನಿವೃತ್ತಿ ವೇತನ/ಕುಟುಂಬ ನಿವೃತ್ತಿ ವೇತನದ ಶೇ. 100 ರಿಂದ ಶೇ. 107ಕ್ಕೆ ಹೆಚ್ಚಿಸಿ ದಿನಾಂಕ : **1ನೇ ಜುಲೈ 2014** ರಿಂದ ಬರುವಂತೆ ಮಂಜೂರು ಮಾಡಲು ಸಹ ಸರ್ಕಾರವು ಹರ್ಷಿಸುತ್ತದೆ.

5. ಈ ಆದೇಶದ ಮೇರೆಗೆ ಮಂಜೂರಾಗಿರುವ ತುಟ್ಟಿ ಭತ್ಯೆಯನ್ನು ಮುಂದಿನ ಆದೇಶ ಹೊರಡಿಸುವವರೆಗೆ ನಗದಾಗಿ ಪಾವತಿ ಮಾಡಲಾಗುವುದು.

6. ತುಟ್ಟಿ ಭತ್ಯೆಯ ಕಾರಣದಿಂದ ಸಂದಾಯ ಮಾಡಬೇಕಾಗಿರುವ ಐವತ್ತು ಪೈಸೆ ಹಾಗೂ ಅದಕ್ಕಿಂತ ಹೆಚ್ಚಿನ ಭಿನ್ನಾಂಕಗಳನ್ನು ಮುಂದಿನ ರೂಪಾಯಿಗೆ ಪೂರ್ಣಗೊಳಿಸತಕ್ಕದ್ದು ಮತ್ತು ಐವತ್ತು ಪೈಸೆಗಿಂತ ಕಡಿಮೆ ಇರುವ ಭಿನ್ನಾಂಕಗಳನ್ನು ಕಡೆಗಣಿಸತಕ್ಕದ್ದು.

7. ತುಟ್ಟಿ ಭತ್ಯೆಯನ್ನು ಸಂಭಾವನೆಯ ವಿಶಿಷ್ಟ ಅಂಶವಾಗಿ ತೋರಿಸುವುದು ಮತ್ತು ಯಾವುದೇ ಉದ್ದೇಶಕ್ಕಾಗಿ ಇದನ್ನು ವೇತನ ಎಂದು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುಂದರ ರಾಜ ಗುಪ್ತ**

ಸರ್ಕಾರದ ಜಂಟಿ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸೇವೆಗಳು–2).

## FINANCE SECRETARIAT

Sub : Dearness Allowance to Teaching Staff on UGC/AICTE/ICAR scales of pay and Judicial Officers/Pensioners on NJPC pay scales-Revision of rates.

Read :
1. G.O. No. FD 10 SRP 2013, dated : 20-05-2013.
2. G.O. No. FD 12 SRP 2013 (11), dated : 12-06-2013.
3. G.O. No. FD 22 SRP 2013, dated : 10-10-2013.
4. G.O. No. FD 7 SRP 2014, dated : 11-04-2014

### GOVERNMENT ORDER NO. FD 8 SRP 2014, BANGALORE, DATED : 1ST OCTOBER 2014

Government are pleased to sanction increase in the rates of Dearness Allowance to Teaching Staff who are on UGC/AICTE/ICAR scales of pay and to Judicial Officers on NJPC pay scales from the existing 100% to 107% of the basic pay with effect from **1st July 2014**.

2. For the purpose of this order the term 'Basic Pay' means, the pay drawn by a Government employee in the UGC/AICTE/ICAR and NJPC scales of pay applicable to the post held by him.

3. Basic Pay shall not include any other emoluments.

4. Government are also pleased to sanction increase in the rates of Dearness Allowance to NJPC Pensioners/Family Pensioners from the existing **100% to 107%** of the basic pension/family pension with effect from **1st July 2014**.

5. The increase in Dearness Allowance admissible under this order is payable in cash until further orders.

6. The payment on account of Dearness Allowance involving fractions of 50 paise and above shall be rounded off to the next rupee and fractions less than 50 paise shall be ignored.

7. The Dearness Allowance will be shown as a district element of remuneration and will not be treated as pay for any purpose.

By Order and in the name of the Governor of Karnataka

**SUNDARA RAJA GUPTHA**

Joint Secretary to Government,

Finance Department (Services-2).

**P.R. 785**

**SC-200**

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಶಿವಮೊಗ್ಗದ 2014–15ನೇ ಸಾಲಿನ ವಾರ್ಷಿಕ ಕ್ರಿಯಾ ಯೋಜನೆಯನ್ನು ಅನುಮೋದಿಸುವ ಬಗ್ಗೆ.

**ಓದಲಾಗಿದೆ :** ಕಾರ್ಯದರ್ಶಿ, ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಶಿವಮೊಗ್ಗ, ಇವರ ಪತ್ರ ಸಂಖ್ಯೆ : ಮಪ್ರಮಂ :ಶಿ:ಸ.ಸಭೆ: ಕ್ರಿ.ಯೋ:2014–15/151, ದಿನಾಂಕ : 20–06–2014.

**ಪ್ರಸ್ತಾವನೆ :**

ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಶಿವಮೊಗ್ಗಕ್ಕೆ 2014–15ನೇ ಸಾಲಿನಲ್ಲಿ ಒದಗಿಸಿರುವ ಅನುದಾನ ಮತ್ತು ಮಂಡಳಿಯಲ್ಲಿ ಲಭ್ಯವಿರುವ ಆರಂಭ ಶಿಲ್ಕುಗಳ ವಿವರಗಳು ಈ ಕೆಳಕಂಡಂತಿವೆ.

**(ರೂ. ಲಕ್ಷಗಳಲ್ಲಿ)**

| ಕ್ರ. ಸಂ. | ವಿವರ | ಆರಂಭಿಕ ಶಿಲ್ಕು (01–04–2014 ರಲ್ಲಿದ್ದಂತೆ) | 2014–15ನೇ ಸಾಲಿನ ಆಯವ್ಯಯ | ಒಟ್ಟು ಅನುದಾನ (3+4) |
|---|---|---|---|---|
| **1** | **2** | **3** | **4** | **5** |
| 1. | 2515–00–103–0–02–101 | 35.152 | 115.00 | 150.152 |
| 2. | 2515–00–103–0–02–132 | 653.886 | 2886.240 | 3540.126 |
| 3. | 2515–00–103–0–02–422 | 284.662 | 549.100 | 833.762 |
| 4. | 2515–00–103–0–02–423 | 110.890 | 249.660 | 360.550 |
| | **ಒಟ್ಟು** | **1084.590** | **3800.000** | **4884.590** |

ಮೇಲೆ ಓದಲಾದ ಪತ್ರದಲ್ಲಿ ಕಾರ್ಯದರ್ಶಿ, ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಶಿವಮೊಗ್ಗ ಇವರು 2014–15ನೇ ಸಾಲಿನಲ್ಲಿ ಲಭ್ಯವಿರುವ ರೂ. 4884.59 ಲಕ್ಷಗಳಿಗೆ ಮಂಡಳಿಯ ಕ್ರಿಯಾ ಯೋಜನೆಯನ್ನು ತಯಾರಿಸಿ ದಿನಾಂಕ : 30–05–2014ರಂದು ನಡೆದ ಮಂಡಳಿಯ ಸರ್ವ ಸದಸ್ಯರ ಸಭೆಯಲ್ಲಿ ಅನುಮೋದನೆಯನ್ನು ಪಡೆಯಲಾಗಿದ್ದು, ಸದರಿ ವಾರ್ಷಿಕ ಕ್ರಿಯಾ ಯೋಜನೆಗೆ ಸರ್ಕಾರದ ಅನುಮೋದನೆ ನೀಡುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮಂಡಳಿಯ 2014–15ನೇ ಸಾಲಿನ ಮಂಡಳಿಯ ಕ್ರಿಯಾ ಯೋಜನೆಗೆ ಅನುಮೋದನೆ ನೀಡಲು ನಿರ್ಣಯಿಸಿದೆ. ಅಂತೆಯೇ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಯೋಇ 22 ಮಪ್ರಮಂ 2014, ಬೆಂಗಳೂರು, ದಿನಾಂಕ : 22–09–2014.**

ಮಲೆನಾಡು ಪ್ರದೇಶಾಭಿವೃದ್ಧಿ ಮಂಡಳಿ, ಶಿವಮೊಗ್ಗದ 2014–15ನೇ ಸಾಲಿನ ರೂ. 4884.59 ಲಕ್ಷಗಳ ಈ ಕೆಳಕಂಡ ವಾರ್ಷಿಕ ಕ್ರಿಯಾ ಯೋಜನೆಗೆ ಮಂಡಳಿಯಲ್ಲಿ ಕೈಗೊಳ್ಳುವ ಎಲ್ಲಾ ಕಾಮಗಾರಿಗಳ ಪಟ್ಟಿಯನ್ನು ಕೂಡಲೇ ಸಲ್ಲಿಸುವ ಷರತ್ತಿಗೊಳಪಟ್ಟು ಅನುಮೋದನೆ ನೀಡಿದೆ.

| ಕ್ರ. ಸಂ. | ವಿವರಗಳು | ಮೊತ್ತ (ರೂ. ಲಕ್ಷಗಳಲ್ಲಿ) |
|---|---|---|
| **ಸಹಾಯಾನುದಾನ** | | |
| 1. | ಆಡಳಿತ ವೆಚ್ಚ | 150.152 |
| | **ಒಟ್ಟು (ಅ)** | **150.152** |
| **ಬಂಡವಾಳ ವೆಚ್ಚ** | | |
| 1 | ಮುಂದುವರಿದ ಕಾಮಗಾರಿಗಳು | 1268.930 |
| 2. | ಹೊಸ ಕಾಮಗಾರಿಗಳು | 1949.800 |
| 3. | ಸರ್ಕಾರದ ವಿವೇಚನಾ ನಿಧಿ | 108.500 |
| 4. | ಅಧ್ಯಕ್ಷರ ವಿವೇಚನಾ ನಿಧಿ | 158.500 |
| 5. | ಮಂಡಳಿಯ ಕಾರ್ಯಕ್ರಮ | 54.396 |
| | **ಒಟ್ಟು (ಆ)** | **3540.126** |
| **ವಿಶೇಷ ಘಟಕ ಯೋಜನೆ** | | |
| 1. | ಮುಂದುವರಿದ ಕಾಮಗಾರಿಗಳು | 545.510 |
| 2. | ಹೊಸ ಕಾಮಗಾರಿಗಳು | 247.000 |
| 3. | ಸರ್ಕಾರದ ವಿವೇಚನಾ ನಿಧಿ | 14.400 |
| 4. | ಅಧ್ಯಕ್ಷರ ವಿವೇಚನಾ ನಿಧಿ | 14.400 |
| 5. | ಮಂಡಳಿಯ ಕಾರ್ಯಕ್ರಮ | 12.452 |
| | **ಒಟ್ಟು (ಇ)** | **833.762** |
| **ಗಿರಿಜನ ಉಪಯೋಜನೆ** | | |
| 1. | ಮುಂದುವರಿದ ಕಾಮಗಾರಿಗಳು | 222.99 |
| 2. | ಹೊಸ ಕಾಮಗಾರಿಗಳು | 120.25 |
| 3. | ಸರ್ಕಾರದ ವಿವೇಚನಾ ನಿಧಿ | 6.80 |

| ಕ್ರ. ಸಂ. | ವಿವರಗಳು | ಮೊತ್ತ (ರೂ. ಲಕ್ಷಗಳಲ್ಲಿ) |
|---|---|---|
| 4. | ಅಧ್ಯಕ್ಷರ ವಿವೇಚನಾ ನಿಧಿ | 6.80 |
| 5. | ಮಂಡಳಿಯ ಕಾರ್ಯಕ್ರಮ | 3.71 |
| | **ಒಟ್ಟು (ಈ)** | **360.55** |
| | **ಒಟ್ಟು (ಅ+ಆ+ಇ+ಈ)** | **4884.59** |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ರಫೀ ಅಹಮದ್ ಎಂ.ಎಸ್.**
ಸರ್ಕಾರದ ಅಧೀನ ಕಾರ್ಯದರ್ಶಿ 1&2,
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

**PR. 786**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ರಾಷ್ಟ್ರೀಯ ಮಾನಸಿಕ ಆರೋಗ್ಯ & ನರ ವಿಜ್ಞಾನಗಳ ಸಂಸ್ಥೆ, ಬೆಂಗಳೂರು ಇಲ್ಲಿನ ಎಂಪಿಹೆಚ್ ಕೋರ್ಸನ್ನು ವ್ಯಾಸಂಗ ಮಾಡುತ್ತಿರುವ ಸೇವಾನಿರತ ವೈದ್ಯರಿಗೆ ಬೋಧನಾ ಶುಲ್ಕ ಮರುಪಾವತಿಸಲು ಶುಲ್ಕದ ದರ ನಿಗದಿಪಡಿಸುವ ಬಗ್ಗೆ.

**ಓದಲಾಗಿದೆ :** ವೈದ್ಯಕೀಯ ಶಿಕ್ಷಣ ನಿರ್ದೇಶಕರ ದಿನಾಂಕ : 26-07-2014ರ ಪತ್ರ ಸಂಖ್ಯೆ : ಎಂಇ/ಎಂಎಸ್‌ಆರ್/ಪಿಜಿ/ಐಎನ್‌ಎಸ್/2012-13.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ವೈದ್ಯಕೀಯ ಶಿಕ್ಷಣ ನಿರ್ದೇಶಕರು, ರಾಷ್ಟ್ರೀಯ ಮಾನಸಿಕ ಆರೋಗ್ಯ ಮತ್ತು ನರ ವಿಜ್ಞಾನಗಳ ಸಂಸ್ಥೆ, ಬೆಂಗಳೂರು, ಈ ಸಂಸ್ಥೆಗೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಿಂದ ಎಂಪಿಹೆಚ್ ವ್ಯಾಸಂಗಕ್ಕೆ ಸೇವಾನಿರತ ಕೋಟಾದಡಿ ನಿಯೋಜನೆಗೊಂಡಿರುವ ವೈದ್ಯಾಧಿಕಾರಿಗಳಿಗೆ ಬೋಧನಾ ಶುಲ್ಕ ಮರುಪಾವತಿ ಸಂಬಂಧ ಸರ್ಕಾರವು ಬೋಧನಾ ಶುಲ್ಕವನ್ನು ನಿಗದಿಪಡಿಸಿರುವ ಆದೇಶದ ಪ್ರತಿಯನ್ನು ಕಳುಹಿಸಿಕೊಡುವಂತೆ ಆಕುಕ ಇಲಾಖೆಯಿಂದ ಕೋರಲಾಗಿದೆ. ಸಂಸ್ಥೆಯು ಕೇಂದ್ರ ಸರ್ಕಾರದ ಅಡಿಯಲ್ಲಿ ಬರುವ ಸ್ವಾಯತ್ತ ಸಂಸ್ಥೆಯಾಗಿದ್ದು, ಎಂಪಿಹೆಚ್ ವ್ಯಾಸಂಗಕ್ಕೆ ವಾರ್ಷಿಕ ರೂ. 50,000/- ಗಳನ್ನು ಬೋಧನಾ ಶುಲ್ಕವಾಗಿ ನಿಗದಿಪಡಿಸಿರುತ್ತದೆ. ಆದರೆ ಈ ದರ ನಿಗದಿ ಬಗ್ಗೆ ಸರ್ಕಾರದ ಆದೇಶವಿರುವುದಿಲ್ಲವಾದ್ದರಿಂದ ಬೋಧನಾ ಶುಲ್ಕ ಮರುಪಾವತಿಗೆ ತೊಂದರೆಯಾಗಿರುತ್ತದೆ. ಈ ಹಿನ್ನೆಲೆಯಲ್ಲಿ ಸದರಿ ಸಂಸ್ಥೆಯು ನಿಗದಿಪಡಿಸಿಕೊಂಡಿರುವ ಬೋಧನಾ ಶುಲ್ಕದ ದರಕ್ಕೆ ಸರ್ಕಾರದ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ ನಿಮಾನ್ಸ್, ಬೆಂಗಳೂರು ಈ ಸಂಸ್ಥೆಯಲ್ಲಿ ಎಂಪಿಹೆಚ್ ವ್ಯಾಸಂಗಕ್ಕೆ ಸೇವಾನಿರತ ಕೋಟಾದಡಿ ನಿಯೋಜನೆಗೊಂಡಿರುವ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವೈದ್ಯಾಧಿಕಾರಿಗಳಿಗೆ ಸಂಸ್ಥೆಯು ನಿಗದಿಪಡಿಸಿಕೊಂಡಿರುವ ವಾರ್ಷಿಕ ರೂ. 50,000/-ಗಳ ಬೋಧನಾ ಶುಲ್ಕವನ್ನು ಮರುಪಾವತಿಸಲು ಸರ್ಕಾರವು ತೀರ್ಮಾನಿಸಿ, ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಕುಕ 325 ಆರ್‌ಜಿಯು 2014, ಬೆಂಗಳೂರು, ದಿನಾಂಕ : 21-10-2014.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ರಾಷ್ಟ್ರೀಯ ಮಾನಸಿಕ ಆರೋಗ್ಯ ಮತ್ತು ನರ ವಿಜ್ಞಾನಗಳ ಸಂಸ್ಥೆ, ಬೆಂಗಳೂರು ಈ ಸಂಸ್ಥೆಯಲ್ಲಿ ಎಂಪಿಹೆಚ್ ವ್ಯಾಸಂಗಕ್ಕೆ ಸೇವಾನಿರತ ಕೋಟಾದಡಿ ನಿಯೋಜನೆಗೊಂಡಿರವ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವೈದ್ಯಾಧಿಕಾರಿಗಳಿಗೆ ವಾರ್ಷಿಕ ರೂ. 50,000/-ಗಳ ಬೋಧನಾ ಶುಲ್ಕವನ್ನು ಮರುಪಾವತಿಸಲು ಆದೇಶಿಸಿದೆ.

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ 2210-01-001-0-01 ಯೋಜನೇತರ ಉಪಶೀರ್ಷಿಕೆ 015-ಪೂರಕ ವೆಚ್ಚಗಳಡಿಯಲ್ಲಿ ಭರಿಸತಕ್ಕದ್ದು.

**P.R. 787**
**SC-50**

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಕೆ. ನಾಗವೇಣಿ**
ಸರ್ಕಾರದ ಅಧೀನ ಕಾರ್ಯದರ್ಶಿ-2,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ).

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ರಾಜ್ಯದಲ್ಲಿ ಅಸ್ತಿತ್ವದಲ್ಲಿರುವ ನರ್ಸಿಂಗ್ ಸಂಸ್ಥೆಗಳಲ್ಲಿ ಹೊಸ ಕೋರ್ಸುಗಳನ್ನು ಪ್ರಾರಂಭಿಸಲು ಹಾಗೂ ಪ್ರವೇಶಮಿತಿಯನ್ನು ಹೆಚ್ಚಿಸಲು ಸರ್ಕಾರದ ಸುತ್ತೋಲೆ ಸಂಖ್ಯೆ : ಆಕುಕ 22 ಎಂಪಿಎಸ್ 2005, ದಿನಾಂಕ : 02-07-2007ರಲ್ಲಿ ವಿಧಿಸಲಾಗಿದ್ದ ಕೆಲವೊಂದು ಷರತ್ತು ಮತ್ತು ನಿಬಂಧನೆಗಳಿಗೆ ವಿನಾಯ್ತಿ ನೀಡುವ ಕುರಿತು

**ಪ್ರಸ್ತಾವನೆ :**

ಸರ್ಕಾರದ ಸುತ್ತೋಲೆ ಸಂಖ್ಯೆ : ಆಕುಕ 22 ಎಂಪಿಎಸ್ 2005, ದಿನಾಂಕ : 02-07-2007ರಲ್ಲಿ ರಾಜ್ಯದಲ್ಲಿ ಹೊಸ ನರ್ಸಿಂಗ್ ಸಂಸ್ಥೆಗಳನ್ನು ಪ್ರಾರಂಭಿಸಲು, ಅಸ್ತಿತ್ವದಲ್ಲಿರುವ ನರ್ಸಿಂಗ್ ಶಾಲೆ ಹಾಗೂ ಕಾಲೇಜುಗಳಲ್ಲಿ ಹೊಸ ಕೋರ್ಸುಗಳನ್ನು ಪ್ರಾರಂಭಿಸಲು ಹಾಗೂ ಪ್ರವೇಶಮಿತಿಯನ್ನು ಹೆಚ್ಚಿಸಲು ಸ್ವಂತ ಕಟ್ಟಡ ಹಾಗೂ ಕ್ರಮವಾಗಿ 100 ಮತ್ತು 150 ಹಾಸಿಗೆ ಸಾಮರ್ಥ್ಯವುಳ್ಳ ಸ್ವಂತ ಆಸ್ಪತ್ರೆಯನ್ನು 05 ವರ್ಷಗಳೊಳಗಾಗಿ ಹೊಂದತಕ್ಕದ್ದೆಂದು ಷರತ್ತು ಮತ್ತು ನಿಬಂಧನೆಯನ್ನು ವಿಧಿಸಲಾಗಿತ್ತು. ಈ ಅವಧಿಯಲ್ಲಿ ಅಸ್ತಿತ್ವದಲ್ಲಿರುವ ಕೆಲವೊಂದು ನರ್ಸಿಂಗ್ ಸಂಸ್ಥೆಗಳು ನರ್ಸಿಂಗ್ ಕೋರ್ಸುಗಳನ್ನು ನಡೆಸಲು ಸ್ವಂತ ಕಟ್ಟಡ ಹಾಗೂ ಸ್ವಂತ ಆಸ್ಪತೆಯನ್ನು ಹೊಂದದಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. ಈ ಶೈಕ್ಷಣಿಕ ಸಂಸ್ಥೆಗಳಲ್ಲಿ ವಿದ್ಯಾಭ್ಯಾಸ ಮಾಡುತ್ತಿರುವ ವಿದ್ಯಾರ್ಥಿಗಳ ಹಿತದೃಷ್ಠಿಯಿಂದ ಈ ಶೈಕ್ಷಣಿಕ ಸಂಸ್ಥೆಗಳಿಗೆ ಸದರಿ ಸುತ್ತೋಲೆಯಲ್ಲಿನ ಕೆಲವು ಷರತ್ತು ಮತ್ತು ನಿಬಂಧನೆಗಳಿಂದ ವಿನಾಯಿತಿ ನೀಡಲು ಸರ್ಕಾರವು ತೀರ್ಮಾನಿಸಿ, ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಕುಕ 168 ಎಂಪಿಎಸ್ 2014(2), ಬೆಂಗಳೂರು, ದಿನಾಂಕ : 27–10–2014.**

ಸುತ್ತೋಲೆ ಸಂಖ್ಯೆ : ಆಕುಕ 22 ಎಂಪಿಎಸ್ 2005, ದಿನಾಂಕ : 02–07–2007ರಲ್ಲಿ ವಿಧಿಸಲಾಗಿದ್ದ ಕಂಡಿಕೆ 3(ಎ) ಮತ್ತು 3ಡಿ(1)ರಲ್ಲಿನ ಷರತ್ತು ಮತ್ತು ನಿಬಂಧನೆಯನ್ನು ಸರ್ಕಾರವು ಕೆಳಕಂಡಂತೆ ತಿದ್ದುಪಡಿ ಮಾಡಿದೆ.

"ಈಗಾಗಲೇ ಅಸ್ತಿತ್ವದಲ್ಲಿರುವ ನರ್ಸಿಂಗ್ ಸಂಸ್ಥೆಗಳು ಹೊಸದಾಗಿ ನರ್ಸಿಂಗ್ ಕೋರ್ಸನ್ನು ಪ್ರಾರಂಭಿಸಲು ಅಥವಾ ಪ್ರವೇಶಮಿತಿಯನ್ನು ಹೆಚ್ಚಿಸಲು ಉದ್ದೇಶಿಸಿರುವ ಸಂಸ್ಥೆಗಳು ಈ ಆದೇಶ ಹೊರಡಿಸಿದ ದಿನಾಂಕದಿಂದ 05 ವರ್ಷದೊಳಗೆ ಸ್ವಂತ ಕಟ್ಟಡ ಮತ್ತು ಸ್ವಂತ ಆಸ್ಪತ್ರೆಯನ್ನು ಹೊಂದತಕ್ಕದ್ದು".

ಮುಂದುವರಿದು, ಸರ್ಕಾರದ ಸುತ್ತೋಲೆ ಸಂಖ್ಯೆ : ಆಕುಕ 22 ಎಂಪಿಎಸ್ 2005, ದಿನಾಂಕ : 02–07–2007ರಲ್ಲಿನ ಇನ್ನಿತರೆ ಷರತ್ತು ಮತ್ತು ನಿಯಮಗಳು ಹಾಗೂ ತತ್ಸಂಬಂಧಿತ ಹೊರಡಿಸಲಾಗಿರುವ ಆದೇಶಗಳು ಯಥಾವತ್ತಾಗಿ ಅನ್ವಯವಾಗುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಆರ್. ನಾಗಭೂಷಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ–ಎ).

## HEALTH AND FAMILY WELFARE SECRETARIAT

**Sub :** For existing Nursing Schools and Colleges, Starting of new courses and increase of seats-Relaxation of certain conditions imposed in Government Circular No. HFW 22 MPS 2005, dated : 02-07-2007.

**PREAMBLE :**

In the Government Circular No. HFW 22 MPS· 2005, dated 02.07.2007 certain conditions were imposed for establishment of new nursing 'schools and colleges, starting of new courses and increase in intake of seats in existing Nursing Institutions in the State shall have their .own building and 100 to 150 bed strength hospitals within 05 years of their inception. The Government was also aware that certain school, colleges and institutions do not have their own building or hospitals to conduct courses. In the interest of students studying in the institutions, the Government has relaxed in imposed conditions and passed this order.

**GOVERNMENT ORDER NO. HFW 168 MPS 2014 {2), BANGALORE, DATED 27.10.2014**

The conditions and regulations in para 3 (a) and 3 (d) (i) in the Government Circular No. HFW 22 MPS 2005, dated 02.07.2007 shall be amended as follows:-

**"For existing nursing Schools and Colleges affiliation to start fresh course or increase intake of seats subject to conditions that the said Institutions must have their own building and own 'hospital within five years from the date of this order".**

In continuation., the other conditions in circular No.: HFW ·22 MPS 2005, dated 02.07.2007 and consequential orders. issued in this regard shall continue to be in force.

By Order and in the name of the Governor of Karnataka
**B.R. NAGABHUSHANA**
Under Secretary. to Government
Health and Family Welfare Department (Medical Education).

**P.R. 788**
**SC-100**

## HEALTH AND FAMILY WELFARE SECRETARIAT

**Sub :** For establishment of new Paramedical Institutions, increase of seats in existing courses and to start new courses – relaxation of certain conditions imposed in Government Circular No. HFW 22 MPS 2005, dated 02.07.2007-reg.

**PREAMBLE :**

In the Government Circular No: HFW 22 MPS- 2005, dated 02.07.2007 certain conditions were imposed for establishment of new Paramedical Institutions, increase of seats in existing courses and to start new courses in the existing Institutions shall have their own 100 to 150 bed strength capacity hospitals within 05 years of their inception. The Government was also aware that certain Paramedical institutions- do' not have their own hospital -to conduct the courses. In the interest of students studying in these institutions, the Government has relaxed certain imposed conditions and passed this order.

**GOVERNMENT ORDER NO. HFW 168-MPS 2014 (1), BANGALORE, DATED 27.10.2014**

The conditions and regulations in para-3 (d) (i) in the circular HFW 22 MPS 2005, dated 02.07.2007 shall be amended asJollows :-

**"For establishment of new Paramedical Institutions, increase of seats in existing courses and to start new courses in the existing Institutions, the requirement of own hospital as mentioned in the circular No: HFW 22 MPS 2005, dated : 02.07.2007 isrelaxed".**

This order come into force with immediate effect.

By Order and in the name of the Governor of Karnataka
**B.R. NAGABHUSHANA**
Under Secretary to Government
Health and Family Welfare Department (MedicalEducation).

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ರಾಜ್ಯದಲ್ಲಿ ಹೊಸ ಪ್ಯಾರಾ ಮೆಡಿಕಲ್ ಸಂಸ್ಥೆಗಳನ್ನು ಸ್ಥಾಪಿಸಲು, ಅಸ್ತಿತ್ವದಲ್ಲಿರುವ ಕೋರ್ಸುಗಳ ಪ್ರವೇಶಮಿತಿಯನ್ನು ಹೆಚ್ಚಿಸಲು ಹಾಗೂ ಹೊಸ ಕೋರ್ಸುಗಳನ್ನು ಪ್ರಾರಂಭಿಸುವ ಬಗ್ಗೆ ಸರ್ಕಾರದ ಸುತ್ತೋಲೆ ಸಂಖ್ಯೆ : ಆಕುಕ 22 ಎಂಪಿಎಸ್ 2005, ದಿನಾಂಕ : 02-07-2007ರಲ್ಲಿ ವಿಧಿಸಲಾಗಿದ್ದ ಕೆಲವೊಂದು ಷರತ್ತು ಮತ್ತು ನಿಬಂಧನೆಗಳಿಗೆ ವಿನಾಯ್ತಿ ನೀಡುವ ಕುರಿತು.

**ಪ್ರಸ್ತಾವನೆ :**

ಸರ್ಕಾರದ ಸುತ್ತೋಲೆ ಸಂಖ್ಯೆ : ಆಕುಕ 22 ಎಂಪಿಎಸ್ 2005, ದಿನಾಂಕ : 02-07-2007ರಲ್ಲಿ ರಾಜ್ಯದಲ್ಲಿ ಹೊಸ ಪ್ಯಾರಾ ಮೆಡಿಕಲ್ ಸಂಸ್ಥೆಗಳನ್ನು ಸ್ಥಾಪಿಸಲು ಹಾಗೂ ಅಸ್ತಿತ್ವದಲ್ಲಿರುವ ಪ್ಯಾರಾ ಮೆಡಿಕಲ್ ಸಂಸ್ಥೆಗಳು ಹೊಸ ಕೋರ್ಸುಗಳನ್ನು ಪ್ರಾರಂಭಿಸಲು ಹಾಗೂ ಪ್ರವೇಶಮಿತಿಯನ್ನು ಹೆಚ್ಚಿಸಲು ಸ್ವಂತ ಕಟ್ಟಡ ಹಾಗೂ ಕ್ರಮವಾಗಿ 100 ಮತ್ತು 150 ಹಾಸಿಗೆ ಸಾಮರ್ಥ್ಯವುಳ್ಳ ಸ್ವಂತ ಆಸ್ಪತ್ರೆಯನ್ನು 05 ವರ್ಷಗಳೊಳಗಾಗಿ ಹೊಂದತಕ್ಕದ್ದೆಂದು ಷರತ್ತು ಮತ್ತು ನಿಬಂಧನೆಯನ್ನು ವಿಧಿಸಲಾಗಿತ್ತು. ಈ ಅವಧಿಯಲ್ಲಿ ಅಸ್ತಿತ್ವದಲ್ಲಿರುವ ಕೆಲವೊಂದು ಪ್ಯಾರಾ ಮೆಡಿಕಲ್ ಸಂಸ್ಥೆಗಳು ಪ್ಯಾರಾ ಮೆಡಿಕಲ್ ಕೋರ್ಸುಗಳನ್ನು ನಡೆಸಲು ಸ್ವಂತ ಕಟ್ಟಡ ಹಾಗೂ ಸ್ವಂತ ಆಸ್ಪತ್ರೆಯನ್ನು ಹೊಂದದಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. ಈ ಶೈಕ್ಷಣಿಕ ಸಂಸ್ಥೆಗಳಲ್ಲಿ ವಿದ್ಯಾಭ್ಯಾಸ ಮಾಡುತ್ತಿರುವ ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ಈ ಶೈಕ್ಷಣಿಕ ಸಂಸ್ಥೆಗಳಿಗೆ ಸದರಿ ಸುತ್ತೋಲೆಯಲ್ಲಿನ ಕೆಲವು ಷರತ್ತು ಮತ್ತು ನಿಬಂಧನೆಗಳಿಂದ ವಿನಾಯಿತಿ ನೀಡಲು ಸರ್ಕಾರವು ತೀರ್ಮಾನಿಸಿ, ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಕುಕ 168 ಎಂಪಿಎಸ್ 2014(1), ಬೆಂಗಳೂರು, ದಿನಾಂಕ : 27-10-2014.**

ಸುತ್ತೋಲೆ ಸಂಖ್ಯೆ : ಆಕುಕ 22 ಎಂಪಿಎಸ್ 2005, ದಿನಾಂಕ : 02-07-2007ರಲ್ಲಿ ವಿಧಿಸಲಾಗಿದ್ದ ಕಂಡಿಕೆ 3ಡಿ(i)ರಲ್ಲಿನ ಷರತ್ತು ಮತ್ತು ನಿಬಂಧನೆಯನ್ನು ಸರ್ಕಾರವು ಕೆಳಕಂಡಂತೆ ತಿದ್ದುಪಡಿ ಮಾಡಿದೆ.

" **ರಾಜ್ಯದಲ್ಲಿ ಹೊಸ ಪ್ಯಾರಾ ಮೆಡಿಕಲ್ ಸಂಸ್ಥೆಗಳನ್ನು ಸ್ಥಾಪಿಸಲು, ಅಸ್ತಿತ್ವದಲ್ಲಿರುವ ಕೋರ್ಸುಗಳ ಪ್ರವೇಶಮಿತಿಯನ್ನು ಹೆಚ್ಚಿಸಲು ಹಾಗೂ ಹೊಸ ಕೋರ್ಸುಗಳನ್ನು ಪ್ರಾರಂಭಿಸಲು ಕ್ರಮವಾಗಿ 100 ಮತ್ತು 150 ಹಾಸಿಗೆ ಸಾಮರ್ಥ್ಯವುಳ್ಳ ಸ್ವಂತ ಆಸ್ಪತ್ರೆಯನ್ನು 05 ವರ್ಷಗಳೊಳಗಾಗಿ ಹೊಂದತಕ್ಕದ್ದೆಂಬ ಷರತ್ತು ಮತ್ತು ನಿಬಂಧನೆಗೆ ವಿನಾಯಿತಿಯನ್ನು ನೀಡಲಾಗಿದೆ.**"

ಈ ಆದೇಶವು ತತ್‌ಕ್ಷಣದಿಂದ ಜಾರಿಗೆ ಬಂದಿರುತ್ತದೆ.

ಮುಂದುವರಿದು, ಸರ್ಕಾರದ ಸುತ್ತೋಲೆ ಸಂಖ್ಯೆ : ಆಕುಕ 22 ಎಂಪಿಎಸ್ 2005, ದಿನಾಂಕ : 02-07-2007ರಲ್ಲಿನ ಇನ್ನಿತರೆ ಷರತ್ತು ಮತ್ತು ನಿಯಮಗಳು ಹಾಗೂ ತತ್ಸಂಬಂಧಿತ ಹೊರಡಿಸಲಾಗಿರುವ ಆದೇಶಗಳು ಯಥಾವತ್ತಾಗಿ ಅನ್ವಯವಾಗುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಬಿ.ಆರ್. ನಾಗಭೂಷಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ).

P.R. 789
SC-100

## ಒಳಾಡಳಿತ ಸಚಿವಾಲಯ

### ಅಧಿಸೂಚನೆ

**ಸಂ:ಹೆಚ್‌ಡಿ 430 ಎಸ್‌ಎಸ್‌ಟಿ 2014, ಬೆಂಗಳೂರು, ದಿನಾಂಕ:28/08/2014**

ಶ್ರೀ ಕೆ.ಎಸ್.ನಾರಾಯಣಚಾರಿ ಇವರು **' ವಾಲ್ಮೀಕಿ ಯಾರು '** ಎಂಬ ಕೃತಿಯನ್ನು ರಚಿಸಿರುತ್ತಾರೆ. ಈ ಕೃತಿಯಲ್ಲಿ ಭಾರತದ ಮಹಾನ್ ಗ್ರಂಥವಾದ ರಾಮಾಯಣವನ್ನು ಬರೆದ ಮಹರ್ಷಿ ವಾಲ್ಮೀಕಿಯವರ ಜಾತಿಯ ಮೂಲ ವಿಶ್ಲೇಷಣೆ ಮಾಡುವ ಪ್ರಯತ್ನದಲ್ಲಿ ಧಾರ್ಮಿಕ ನಂಬಿಕೆಗಳಿಗೆ ಧಕ್ಕೆ ಉಂಟುಮಾಡಿರುತ್ತಾರೆ. ಈ ವಿಚಾರವಾಗಿ ದಿನಾಂಕ 24/07/2014ರಂದು ವಿಧಾನ ಪರಿಷತ್ತಿನಲ್ಲಿ ಚರ್ಚೆ ನಡೆದಿರುತ್ತದೆ. ಚರ್ಚೆಯ ನಂತರ ಮಾನ್ಯ ಸಭಾ ನಾಯಕರು ಸದರಿ ಪುಸ್ತಕವನ್ನು ಮುಟ್ಟುಗೋಲು ಹಾಕಿಕೊಳ್ಳುವುದಾಗಿ ಸದನದಲ್ಲಿ ಭರವಸೆ ನೀಡಿದ್ದಾರೆ. ಬೇಡ ನಾಯಕ ಜನಾಂಗದವರನ್ನು ಅವಹೇಳನಕಾರಿಯಾಗಿ ಚಿತ್ರಿಸಲಾಗಿದ್ದು, ಸಮಾಜದ ಅಶಾಂತಿಗೆ ಕಾರಣವಾಗುವ ಮತ್ತು ಮಹರ್ಷಿ ವಾಲ್ಮೀಕಿ ಬೇಡ ಅಲ್ಲ, ಅವನು ಒಬ್ಬ ಬ್ರಾಹ್ಮಣ, ಎಂಬ ವಾದವನ್ನು ಮಂಡಿಸಿ, ತಲೆತಲಾಂತರಗಳಿಂದ ಇರುವ ಜನರ ವಿಶ್ವಾಸಕ್ಕೆ ದ್ರೋಹ ಮಾಡಿದಂತಾಗಿದೆ. ಅಲ್ಲದೇ, ಬೇಡ ಜನಾಂಗದ ಸ್ತ್ರೀ ಸಮೂಹವನ್ನು ಸಹ ಈ ಪುಸ್ತಕದಲ್ಲಿ ನಿಂದಿಸಿದ್ದು, ಸಮಾಜದಲ್ಲಿ ವಿವಾದವನ್ನು ಅನಗತ್ಯವಾಗಿ ಸೃಷ್ಟಿಸಿ, ಜಾತಿ-ಜಾತಿಗಳ ನಡುವೆ ವೈಷಮ್ಯವನ್ನು ಹುಟ್ಟಿಸುವ ವಿವಾದಾತ್ಮಕ ಕೃತಿಯಾಗಿರುತ್ತದೆ. ಸದರಿ ಪುಸ್ತಕದಲ್ಲಿ ವ್ಯಕ್ತಪಡಿಸಿರುವ ಅಂಶಗಳು ಸತ್ಯಕ್ಕೆ ದೂರವಾದಂತಹುಗಳಾಗಿದ್ದು, ಇಂತಹ ಕೃತಿಯನ್ನು ಪ್ರಕಟಿಸುವುದು ಐಪಿಸಿ ಸೆಕ್ಷನ್ 153(ಎ) ಹಾಗೂ 295(ಎ) ಪ್ರಕಾರ ಅಪರಾಧವಾಗುತ್ತದೆ. ಇದರಿಂದ ರಾಜ್ಯದ ಕಾನೂನು ಮತ್ತು ಸುವ್ಯವಸ್ಥೆಗೆ ಭಂಗ ಉಂಟಾಗುತ್ತಿರುವುದರಿಂದ, ಸದರಿ ಕೃತಿಯನ್ನು ಮುಟ್ಟುಗೋಲು ಹಾಕಿಕೊಳ್ಳುವುದು ಅನಿವಾರ್ಯವೆಂದು ಸರ್ಕಾರಕ್ಕೆ ಮನವರಿಕೆಯಾಗಿದೆ.

ಆದುದರಿಂದ, ಭಾರತೀಯ ದಂಡ ಪ್ರಕ್ರಿಯಾ ಸಂಹಿತೆಯ ಕಲಂ 95ರ ಅಡಿಯಲ್ಲಿರುವ ಅಧಿಕಾರವನ್ನು ಚಲಾಯಿಸಿ ಶ್ರೀ ಕೆ.ಎಸ್.ನಾರಾಯಣಚಾರಿ ಇವರು ಬರೆದಿರುವ **" ವಾಲ್ಮೀಕಿ ಯಾರು "** ಎಂಬ ಕೃತಿಯನ್ನು ಈ ತಕ್ಷಣದಿಂದಲೇ ಜಾರಿಗೆ ಬರುವಂತೆ ಸರ್ಕಾರವು ಮುಟ್ಟುಗೋಲು ಹಾಕಿ ಆದೇಶವನ್ನು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಗೋವಿಂದ ಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ (ಕಾನೂನು ಮತ್ತು ಸುವ್ಯವಸ್ಥೆ)

P.R. 841
SC - 100

ಮುದ್ರಕರು ಹಾಗೂ ಪ್ರಕಾಶಕರು:- ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು-59

## ಕಾರ್ಮಿಕ ಸಚಿವಾಲಯ

**ವಿಷಯ:** ಶ್ರೀ ಪಿ.ಎಸ್.ಎಸ್.ಥಾಮಸ್ ವರದಿಯ ಶಿಫಾರಸ್ಸಿನನ್ವಯ ರಾಜ್ಯದಲ್ಲಿನ ಖಾಸಗಿ ಅನುದಾನಿತ ಕೈಗಾರಿಕಾ ತರಬೇತಿ ಕೇಂದ್ರಗಳ ಸಿಬ್ಬಂದಿ ವರ್ಗದವರಿಗೆ ಪಿಂಚಣಿ, ಗ್ರಾಚ್ಯುಯಿಟಿ, ಸೇವಾ ಸೌಲಭ್ಯಗಳನ್ನು ಮತ್ತು ಸೇವಾ ನಿಯಮಗಳನ್ನೊಳಗೊಂಡಂತೆ ಮಂಜೂರು ಮಾಡುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಕಾಇ 45 ಇಟಿಐ 91 ದಿನಾಂಕ: 15/11/1997.
2. ಸರ್ಕಾರದ ಆದೇಶ ಸಂಖ್ಯೆ: ಕಾಇ 385 ಇಟಿಐ 2005 ದಿನಾಂಕ: 16/01/2007.
3. ಸರ್ಕಾರದ ಆದೇಶ ಸಂಖ್ಯೆ: ಕಾಇ 385 ಇಟಿಐ 2005 ದಿನಾಂಕ: 01/10/2007.
4. ಸರ್ಕಾರದ ಆದೇಶ ಸಂಖ್ಯೆ: ಕಾಇ 58 ಇಟಿಎಂ 2009 ದಿನಾಂಕ: 24/08/2009.
5. ಸರ್ಕಾರದ ಆದೇಶ ಸಂಖ್ಯೆ: ಕಾಇ 29 ಇಟಿಐ 2012 ದಿನಾಂಕ: 18/06/2014.
6. ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ (ಸಚಿವ ಸಂಪುಟ), ಸಚಿವ ಸಂಪುಟ ವ್ಯವಹಾರಗಳ ಇಲಾಖೆ, ವಿಧಾನಸೌಧ. ಇವರ ಪ್ರಕರಣ ಸಂಖ್ಯೆ: ಸಿ:825/2013 ದಿನಾಂಕ 18/12/2013.
7. ಮಾನ್ಯ ಉನ್ನತ ಶಿಕ್ಷಣ ಮತ್ತು ಪ್ರವಾಸೋದ್ಯಮ ಸಚಿವರ ಅಧ್ಯಕ್ಷತೆಯಲ್ಲಿ ದಿನಾಂಕ: 15/07/2014ರಂದು ನಡೆದ ಸಭೆಯ ನಡವಳಿ.
8. ಸಚಿವ ಸಂಪುಟ ಟಿಪ್ಪಣಿ ವಿಷಯ ಸಂಖ್ಯೆ: ಸಿ:698:2014.
9. ಸರ್ಕಾರದ ಮುಖ್ಯಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ (ಸಚಿವ ಸಂಪುಟ), ಸಚಿವ ಸಂಪುಟ ವ್ಯವಹಾರಗಳ ಇಲಾಖೆ, ವಿಧಾನಸೌಧ. ಇವರ ಪ್ರಕರಣ ಸಂಖ್ಯೆ: ಸಿ:698/2014 ದಿನಾಂಕ 22/12/2014.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ರಾಜ್ಯದಲ್ಲಿರುವ ಅರ್ಹ ಕೈಗಾರಿಕಾ ತರಬೇತಿ ಸಂಸ್ಥೆಗಳಿಗೆ ದಿನಾಂಕ: 1/11/97ರಿಂದ ಅನ್ವಯವಾಗುವಂತೆ ವೇತನ ಸಹಾಯಾನುದಾನವನ್ನು ಷರತ್ತುಗಳು ಮತ್ತು ಈ ಸಂಬಂಧ ತಯಾರಿಸಿರುವ ಸಹಾಯಾನುದಾನ ಸಂಹಿತೆಯಲ್ಲಿ ನಮೂದಿಸಿರುವ ಷರತ್ತುಗಳಿಗೆ ಒಳಪಟ್ಟು ಬಿಡುಗಡೆ ಮಾಡಲು ಸರ್ಕಾರದ ಅನುಮತಿಯನ್ನು ನೀಡಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಅನುದಾನಿತ ಖಾಸಗಿ ಕೈಗಾರಿಕಾ ತರಬೇತಿ ಸಂಸ್ಥೆಗಳ ಸಿಬ್ಬಂದಿಗೆ ವೇತನ ಸಹಾಯಾನುದಾನವನ್ನು ಶೇಕಡ 75 ರಿಂದ 85ಕ್ಕೆ ಹೆಚ್ಚುವರಿ ಮಾಡಲು ಮಂಜೂರಾತಿ ನೀಡಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಕರ್ನಾಟಕ ರಾಜ್ಯದಲ್ಲಿರುವ ಉದ್ಯೋಗ ಮತ್ತು ತರಬೇತಿ ಇಲಾಖೆಯ ಆಡಳಿತ ನಿಯಂತ್ರಣಕ್ಕೆ ಒಳಪಡುವ ಖಾಸಗಿ ಅನುದಾನಿತ ಕೈಗಾರಿಕಾ ತರಬೇತಿ ಸಂಸ್ಥೆಗಳ ಸಿಬ್ಬಂದಿಗೆ ನೀಡಲಾಗುತ್ತಿರುವ ವೇತನ ಸಹಾಯಾನುದಾನವನ್ನು ಶೇ. 85 ರಿಂದ ಶೇ. 100ಕ್ಕೆ ಹೆಚ್ಚಿಸಲು ಮಂಜೂರಾತಿ ನೀಡಲಾಗಿತ್ತು.

ಮೇಲೆ (4)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಉದ್ಯೋಗ ಮತ್ತು ತರಬೇತಿ ಇಲಾಖೆಯ ಅನುದಾನಿತ ಕೈಗಾರಿಕಾ ತರಬೇತಿ ಕೇಂದ್ರಗಳ ಸಿಬ್ಬಂದಿಗಳಿಗೆ 2009–10ನೇ ಸಾಲಿನ ಬ್ಲಾಕ್ ಅವಧಿಯ ಗಳಿಕೆ ರಜೆಯನ್ನು ಅಧ್ಯರ್ಪಿಸಿ ನಗದೀಕರಣ ಸೌಲಭ್ಯವನ್ನು, ಲಭ್ಯವಿರುವ ಅನುದಾನದಿಂದ ವೆಚ್ಚವನ್ನು ಭರಿಸುವ ಷರತ್ತಿಗೊಳಪಟ್ಟು, ವಿಸ್ತರಿಸಲು ಮಂಜೂರಾತಿ ನೀಡಲಾಗಿತ್ತು.

ಮೇಲೆ (5)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಅನುದಾನಿತ ಕೈಗಾರಿಕಾ ತರಬೇತಿ ಸಂಸ್ಥೆಗಳ ಸಿಬ್ಬಂದಿಗಳಿಗೆ ಗಳಿಕೆ ರಜೆ ನಗದೀಕರಣ ಯೋಜನೆಯನ್ನು 2014–15ನೇ ಸಾಲಿನ ಬ್ಲಾಕ್ ಅವಧಿಯ ಗಳಿಕೆ ರಜೆಯನ್ನು ಅಧ್ಯರ್ಪಿಸಿ ನಗದೀಕರಣ ಸೌಲಭ್ಯವನ್ನು, ಲೆಕ್ಕಶೀರ್ಷಿಕೆ 2230–03–101–0–01 ಖಾಸಗಿ ಅನುದಾನಿತ ತರಬೇತಿ ಸಂಸ್ಥೆಗಳ ಸಹಾಯಾನುದಾನ ಯೋಜನೆಯಡಿ ಲಭ್ಯವಿರುವ ಅನುದಾನದಿಂದ ಭರಿಸುವ ಷರತ್ತಿಗೊಳಪಟ್ಟು ಮಂಜೂರಾತಿ ನೀಡಲಾಗಿತ್ತು.

ಮೇಲೆ (6)ರಲ್ಲಿ ಓದಲಾದ ಸಚಿವ ಸಂಪುಟದ ನಿರ್ಣಯದಲ್ಲಿ ವಿವಿಧ ಇಲಾಖೆಗಳ ಅನುದಾನ ನೀತಿ ಸಂಹಿತೆಗಳನ್ನು ಪರಾಮರ್ಶಿಸಲು ಮಾನ್ಯ ಉನ್ನತ ಶಿಕ್ಷಣ ಮತ್ತು ಪ್ರವಾಸೋದ್ಯಮ ಸಚಿವರ ಅಧ್ಯಕ್ಷತೆಯಲ್ಲಿ ರಚಿಸಲಾದ ಸಚಿವ ಸಂಪುಟದ ಉಪ ಸಮಿತಿಯು ರಾಜ್ಯದ ಖಾಸಗಿ ಕೈಗಾರಿಕಾ ತರಬೇತಿ ಕೇಂದ್ರಗಳಿಗೆ ರೂಪಿಸಲಾದ ಪರಿಷ್ಕೃತ ಅನುದಾನ ನೀತಿ ಸಂಹಿತೆ 2011ನ್ನೂ ಸಹ ಪರಾಮರ್ಶಿಸಿ ಸೂಕ್ತ ಸಲಹೆ ನೀಡಬೇಕೆಂದು ಸಚಿವ ಸಂಪುಟವು ಇಚ್ಛಿಸಿತು. ಮುಂದುವರೆದು, ಸದರಿ ಉಪ ಸಮಿತಿಗೆ ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು ಹಾಗೂ ಮಾನ್ಯ ಕಾರ್ಮಿಕ ರಾಜ್ಯ ಸಚಿವರುಗಳನ್ನು ಸದರಿ ಉಪ ಸಮಿತಿಗೆ ಹೆಚ್ಚುವರಿ ಸದಸ್ಯರುಗಳನ್ನಾಗಿ ನೇಮಿಸಲು ಸಚಿವ ಸಂಪುಟವು ನಿರ್ಧರಿಸಿತು.

ಮೇಲೆ (7)ರಲ್ಲಿ ಓದಲಾದ ಸಭೆಯಲ್ಲಿ ಶ್ರೀ ಪಿ.ಎಸ್.ಎಸ್.ಥಾಮಸ್ ವರದಿಯಲ್ಲಿ ಶಿಫಾರಸ್ಸು ಮಾಡಿರುವ ಪಿಂಚಣಿ, ಗ್ರಾಚ್ಯುಯಿಟಿ, ಸೇವಾ ನಿಯಮಗಳನ್ನೊಳಗೊಂಡಂತೆ ಮತ್ತು ಅನುದಾನಿತ ಶಿಕ್ಷಣ ಸಂಸ್ಥೆಗಳ ಸಿಬ್ಬಂದಿಗಳಿಗೆ ಒದಗಿಸಿರುವ ಎಲ್ಲಾ ಸೌಲಭ್ಯಗಳನ್ನು ಅನುದಾನಿತ ಖಾಸಗಿ ಕೈಗಾರಿಕಾ ತರಬೇತಿ ಸಂಸ್ಥೆಗಳ ಸಿಬ್ಬಂದಿಗೂ ವಿಸ್ತರಿಸಲು ಸಚಿವ ಸಂಪುಟ ಉಪ ಸಮಿತಿಯು ಸರ್ವಾನುಮತದ ಅನುಮೋದನೆಯನ್ನು ನೀಡಿತು.

ಮೇಲೆ (8)ರಲ್ಲಿ ಓದಲಾದ ಸಚಿವ ಸಂಪುಟ ಟಿಪ್ಪಣಿಯಲ್ಲಿ ಖಾಸಗಿ ಅನುದಾನಿತ ಶಿಕ್ಷಣ ಸಂಸ್ಥೆಗಳ ಸಿಬ್ಬಂದಿಗೆ ಇರುವಂತೆ ಪಿಂಚಣಿ, ಗ್ರಾಚುಯಿಟಿ, ಸೇವಾ ಸೌಲಭ್ಯಗಳು ಮತ್ತು ಸೇವಾ ನಿಯಮಗಳನ್ನು ಖಾಸಗಿ ಅನುದಾನಿತ ತರಬೇತಿ ಸಂಸ್ಥೆಗಳ ಸಿಬ್ಬಂದಿಗೂ ಸಹ ವಿಸ್ತರಿಸಿರುವ ಶ್ರೀ ಪಿ.ಎಸ್.ಎಸ್.ಥಾಮಸ್ ಸಮಿತಿಯ ಶಿಫಾರಸ್ಸನ್ನು ಸಚಿವ ಸಂಪುಟದ ಉಪ ಸಮಿತಿಯು ನಿರ್ಣಯಿಸಿರುವಂತೆ ಸಚಿವ ಸಂಪುಟವು ಅನುಮೋದಿಸಿದಲ್ಲಿ ಉದ್ಭವಿಸಬಹುದಾದ ಆರ್ಥಿಕ ಹೊರೆಯನ್ನು ಇಲಾಖೆಯು ಪ್ರಸ್ತುತ ವೇತನ ಮತ್ತು ಇತರೆ ಭತ್ಯೆಗಳನ್ನು ಪರಿಶೀಲಿಸಿ ಲೆಕ್ಕಾಚಾರ ಮಾಡಿರುತ್ತದೆ. ಈ ಪ್ರಸ್ತಾವನೆಯಿಂದಾಗಿ ಉಂಟಾಗುವ

ಆರ್ಥಿಕ ವೆಚ್ಚ 38.44 ಕೋಟಿಗಳಾಗಿದ್ದು, ವಿವರಗಳನ್ನು ನೀಡಲಾಗಿರುತ್ತದೆ. ಆದ್ದರಿಂದ ಸಚಿವ ಸಂಪುಟದ ಉಪಸಮಿತಿಯು ನಿರ್ಣಯಿಸಿರುವಂತೆ ಖಾಸಗಿ ಅನುದಾನಿತ ಶಿಕ್ಷಣ ಸಂಸ್ಥೆಗಳ ಸಿಬ್ಬಂದಿಗೆ ಇರುವಂತೆ ಪಿಂಚಣಿ, ಗ್ರಾಚುಯಿಟಿ, ಸೇವಾ ಸೌಲಭ್ಯಗಳು ಮತ್ತು ಸೇವಾ ನಿಯಮಗಳನ್ನು ಖಾಸಗಿ ಅನುದಾನಿತ ತರಬೇತಿ ಸಂಸ್ಥೆಗಳ ಎಲ್ಲಾ ಸಿಬ್ಬಂದಿಗೂ ಸಹ ವಿಸ್ತರಿಸುವ ಶ್ರೀ ಪಿ.ಎಸ್.ಎಸ್.ಥಾಮಸ್ ಸಮಿತಿಯ ಶಿಫಾರಸ್ಸನ್ನು ಅಂಗೀಕರಿಸಲು ಹಾಗೂ ತತ್ಸಂಬಂಧದಲ್ಲಿ ಉಂಟಾಗುವ ವೆಚ್ಚಗಳನ್ನು ಆಯವ್ಯಯದಿಂದ ಭರಿಸಲು ಅನುಮೋದನೆಯನ್ನು ಕೋರಲಾಗಿದೆ.

ಮೇಲೆ (9)ರಲ್ಲಿ ಓದಲಾದ ಸಚಿವ ಸಂಪುಟದ ನಿರ್ಣಯದಲ್ಲಿ ಸಚಿವ ಸಂಪುಟ ಟಿಪ್ಪಣಿಯ ಕಂಡಿಕೆ 16ರಲ್ಲಿ ಒಳಗೊಂಡಿರುವ ಪ್ರಸ್ತಾವನೆಗಳನ್ನು ಸಚಿವ ಸಂಪುಟವು ಅನುಮೋದಿಸುತ್ತಾ, ಖಾಸಗಿ ಅನುದಾನಿತ ಶಿಕ್ಷಣ ಸಂಸ್ಥೆಗಳ ಸಿಬ್ಬಂದಿಗೆ ಇರುವಂತೆ ಪಿಂಚಣಿ, ಗ್ರಾಚ್ಯುಯಿಟಿ, ಸೇವಾ ಸೌಲಭ್ಯಗಳು ಹಾಗೂ ಸೇವಾ ನಿಯಮಗಳನ್ನು 196 ಖಾಸಗಿ ಅನುದಾನಿತ ಕೈಗಾರಿಕಾ ತರಬೇತಿ ಸಂಸ್ಥೆಗಳ ಸಿಬ್ಬಂದಿಗೆ ಭವಿಷ್ಯವರ್ತಿಯಾಗಿ (Prospective) ನೀಡಲು ಸಚಿವ ಸಂಪುಟವು ನಿರ್ಧರಿಸಿತು.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಕಾಇ 303 ಇಟಿಐ 2014 ಬೆಂಗಳೂರು, ದಿನಾಂಕ : 29/12/2014**

ಶ್ರೀ ಪಿ.ಎಸ್.ಎಸ್.ಥಾಮಸ್ ವರದಿಯ ಶಿಫಾರಸ್ಸಿನನ್ವಯ ರಾಜ್ಯದಲ್ಲಿನ ಖಾಸಗಿ ಅನುದಾನಿತ ಶಿಕ್ಷಣ ಸಂಸ್ಥೆಗಳ ಸಿಬ್ಬಂದಿಗೆ ಇರುವಂತೆ ಪಿಂಚಣಿ, ಗ್ರಾಚ್ಯುಯಿಟಿ, ಸೇವಾ ಸೌಲಭ್ಯಗಳು ಹಾಗೂ ಸೇವಾ ನಿಯಮಗಳನ್ನು ಖಾಸಗಿ ಅನುದಾನಿತ ಕೈಗಾರಿಕಾ ತರಬೇತಿ ಸಂಸ್ಥೆಗಳ ಸಿಬ್ಬಂದಿಗೆ ಭವಿಷ್ಯವರ್ತಿಯಾಗಿ (Prospective) ನೀಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಪಿಂಚಣಿ ಮತ್ತು ಗ್ರಾಚ್ಯುಯಿಟಿ ಸೌಲಭ್ಯವು ರಾಜ್ಯದ 196 ಖಾಸಗಿ ಅನುದಾನಿತ ಕೈಗಾರಿಕಾ ತರಬೇತಿ ಸಂಸ್ಥೆಗಳಲ್ಲಿ ದಿನಾಂಕ: 01/04/2006ರ ಪೂರ್ವದಲ್ಲಿ ನೇಮಕಾತಿ ಹೊಂದಿರುವ ಸಿಬ್ಬಂದಿಗೆ ಮಾತ್ರ ಅನ್ವಯಿಸುತ್ತದೆ.

ಈ ಆದೇಶವು ಕರ್ನಾಟಕ ಸರ್ಕಾರದ (ಕಾರ್ಯಕಲಾಪಗಳ ನಿರ್ವಹಣೆ) ನಿಯಮಗಳು, 1977ರ 17ನೇ ನಿಯಮದ (2)ನೇ ಉಪ ನಿಯಮದ ಪರಂತುಕದ ವ್ಯಾಪ್ತಿಯೊಳಗೆ ಬರುತ್ತದೆ ಮತ್ತು ಅದರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ವಿ.ಪ್ರಕಾಶ್

ಪೀಠಾಧಿಕಾರಿ,

ಕಾರ್ಮಿಕ ಇಲಾಖೆ.

(ಉದ್ಯೋಗ ಮತ್ತು ತರಬೇತಿ)

PR. 8

SC. 500

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ:** ಕರ್ನಾಟಕ ಕಬ್ಬು (ಖರೀದಿ ಮತ್ತು ಸರಬರಾಜು ನಿಯಂತ್ರಣ) (ತಿದ್ದುಪಡಿ) ಅಧಿನಿಯಮ 2014ರ ಪ್ರಕಾರ ರಚಿಸಲಾದ ಕಬ್ಬು ನಿಯಂತ್ರಣ ಮಂಡಳಿಗೆ ರೈತ ಮುಖಂಡರು, ಸಕ್ಕರೆ ಕಾರ್ಖಾನೆಗಳು ಹಾಗೂ ಕೃಷಿ ವಿಜ್ಞಾನ ವಿಶ್ವವಿದ್ಯಾನಿಲಯದಿಂದ ಪ್ರತಿನಿಧಿಗಳನ್ನು ನಾಮನಿರ್ದೇಶನ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 14 ಶಾಸನ 2013, ದಿ: 12-03-2013
2. ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಐ 69 ಎಸ್‌ಜಿಎಫ್ 2013, ದಿ: 03-08-2013
3. ಸರ್ಕಾರದ ಆದೇಶ ಸಂಖ್ಯೆ: ವಾಕೈ 69 ಎಸ್‌ಜಿಎಫ್ 2013, ದಿ: 06-09-2013.
4. ಸರ್ಕಾರದ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 23 ಶಾಸನ 2014 ದಿ: 28-08-2014
5. ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ಪತ್ರ ಸಂಖ್ಯೆ: ಡಿಎಸ್‌ಕೆ ಎಸ್‌ಟಿಟಿ 05 2014-15 ದಿನಾಂಕ: 12-09-2014

**ಪ್ರಸ್ತಾವನೆ:**

1. ಮೇಲೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆ ದಿನಾಂಕ 12-03-2013ಲ್ಲಿ, ಕರ್ನಾಟಕ ಕಬ್ಬು (ಖರೀದಿ ಮತ್ತು ಸರಬರಾಜು ನಿಯಂತ್ರಣ) ಅಧಿನಿಯಮ 2013ನ್ನು (Karnataka Sugarcane (Regulation of Purchase and Supply) Act, 2013) ಹೊರಡಿಸಲಾಗಿರುತ್ತದೆ. ಮೇಲೆ (2)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆ ದಿನಾಂಕ 03-08-2013ರಲ್ಲಿ, ಕರ್ನಾಟಕ ಕಬ್ಬು ನಿಯಂತ್ರಣ ಮಂಡಳಿ (ವ್ಯವಹಾರ ನಿರ್ವಹಣೆ ಪದ್ಧತಿ) ನಿಯಮ 2013 (Karnataka Sugarcane Control Board (Procedure regarding Transaction of Business) Rule 2013)ಅನ್ನು ಹೊರಡಿಸಲಾಗಿರುತ್ತದೆ.
2. ಮೇಲೆ (3)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆ ದಿನಾಂಕ 28-08-2014ರಲ್ಲಿ, ಕರ್ನಾಟಕ ಕಬ್ಬು (ಖರೀದಿ ಮತ್ತು ಸರಬರಾಜು ನಿಯಂತ್ರಣ) (ತಿದ್ದುಪಡಿ) ಅಧಿನಿಯಮ 2014ನ್ನು (Karnataka Sugarcane (Regulation of Purchase and Supply) Act, 2014) ಹೊರಡಿಸಲಾಗಿರುತ್ತದೆ. ಮೇಲೆ (4)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ 06-09-2013ರಲ್ಲಿ, ಕರ್ನಾಟಕ ಕಬ್ಬು (ಖರೀದಿ ಮತ್ತು ಸರಬರಾಜು ನಿಯಂತ್ರಣ) ಅಧಿನಿಯಮ 2013ರ ಕಂಡಿಕೆ 3(2)ರ ಪ್ರಕಾರ ಕಬ್ಬು ನಿಯಂತ್ರಣ ಮಂಡಳಿಯನ್ನು ರಚಿಸಲಾಗಿದೆ.
3. ಮೇಲೆ (5)ರಲ್ಲಿ ಓದಲಾದ ಪತ್ರ ದಿನಾಂಕ 12-09-2014ರಲ್ಲಿ, ಕರ್ನಾಟಕ ಕಬ್ಬು (ಖರೀದಿ ಮತ್ತು ಸರಬರಾಜು ನಿಯಂತ್ರಣ) (ತಿದ್ದುಪಡಿ) ಅಧಿನಿಯಮ 2014ರ ಕಂಡಿಕೆ 3(i)(2)ರ ಪ್ರಕಾರ ಕಬ್ಬು ನಿಯಂತ್ರಣ ಮಂಡಳಿಯನ್ನು ರಚಿಸಲು ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಬೆಂಗಳೂರು ಇವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಕಬ್ಬು ನಿಯಂತ್ರಣ ಮಂಡಳಿ ರಚಿಸಲು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 241 ಎಸ್‌ಜಿಎಫ್ 2014, ಬೆಂಗಳೂರು ದಿನಾಂಕ: 10–10–2014**

ಕರ್ನಾಟಕ ಕಬ್ಬು (ಖರೀದಿ ಮತ್ತು ಸರಬರಾಜು ನಿಯಂತ್ರಣ) (ತಿದ್ದುಪಡಿ) ಅಧಿನಿಯಮ 2014ರ ಕಂಡಿಕೆ 3(i)(2)ರ ಪ್ರಕಾರ ಈ ಕೆಳಕಂಡ ಸದಸ್ಯರನ್ನೊಳಗೊಂಡ ಕಬ್ಬು ನಿಯಂತ್ರಣ ಮಂಡಳಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ರಚಿಸಿದೆ.

**ಕಬ್ಬು ನಿಯಂತ್ರಣ ಮಂಡಳಿ**

| | |
|---|---|
| (ಎ) ಸಕ್ಕರೆ ಖಾತೆ ಹೊಂದಿದ ಸಚಿವರು | – ಅಧ್ಯಕ್ಷರು |
| (ಬಿ) ಕೃಷಿ ಖಾತೆ ಹೊಂದಿದ ಸಚಿವರು | – ಸದಸ್ಯರು |
| (ಸಿ) ಸಹಕಾರ ಖಾತೆ ಹೊಂದಿದ ಸಚಿವರು | – ಸದಸ್ಯರು |
| (ಡಿ) ಸರ್ಕಾರದ ಕಾರ್ಯದರ್ಶಿ, ಆರ್ಥಿಕ ಇಲಾಖೆ | – ಸದಸ್ಯರು |
| (ಇ) ಸರ್ಕಾರದ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ | – ಸದಸ್ಯರು |
| (ಎಫ್) ಕೃಷಿ ಆಯುಕ್ತರು | – ಸದಸ್ಯರು |
| (ಜಿ) ನಿಯಂತ್ರಕರು, ಕಾನೂನು ಮಾಪನ ಶಾಸ್ತ್ರ ಇಲಾಖೆ | – ಸದಸ್ಯರು |

**(ಹೆಚ್) ಕಬ್ಬು ಬೆಳೆಗಾರರ ನಾಮ ನಿರ್ದೇಶಿತ ರೈತ ಪ್ರತಿನಿಧಿಗಳು**

| | | |
|---|---|---|
| (1) | ಶ್ರೀ ಕೆ.ಎಸ್.ಪುಟ್ಟಣ್ಣಯ್ಯ, ಮಾನ್ಯ ಶಾಸಕರು, ಬಿನ್ ಶ್ರೀಕಂಠೇಗೌಡ, ಕ್ಯಾತನಹಳ್ಳಿ, ಪಾಂಡವಪುರ ತಾಲ್ಲೂಕು, ಮಂಡ್ಯ ಜಿಲ್ಲೆ– (ಮೈಸೂರು ವಿಭಾಗ) | –ಸದಸ್ಯರು |
| (2) | ಶ್ರೀ ರಾಮನಗೌಡ ಬಸವನಗೌಡ ಪಾಟೀಲ್, ರಾಯಬಾಗ್, ಬೆಳಗಾವಿ ಜಿಲ್ಲೆ –(ಬೆಳಗಾವಿ ವಿಭಾಗ) | |
| (3) | ಶ್ರೀ ಸುಭಾಸ ಬಸಪ್ಪ ಶಿರಬೂರ ಸಾ.ನಾಗರಾಳ, ಮುಧೋಳ್, ಬಾಗಲಕೋಟೆ ಜಿಲ್ಲೆ – (ಬೆಳಗಾವಿ ವಿಭಾಗ) | |
| (4) | ಶ್ರೀ ತೇಜಸ್ವಿ ವಿ.ಪಟೇಲ್, ಬಿನ್ ವಿ.ಹೆಚ್.ಪಟೇಲ್, ಕಾರಿಗನೂರು, ಚನ್ನಗಿರಿ ತಾಲ್ಲೂಕು, ದಾವಣಗೆರೆ ಜಿಲ್ಲೆ–(ಬೆಂಗಳೂರು ವಿಭಾಗ) | |
| (5) | ಶ್ರೀ ಪರಮೇಶ್ವರ ಪಾಟೀಲ್ ಬಿನ್ ಕೇಶವರಾವ್ ಪಾಟೀಲ್, ಹುಮ್ನಾಬಾದ್, ಬೀದರ್ ಜಿಲ್ಲೆ – (ಗುಲ್ಬರ್ಗಾ ವಿಭಾಗ) | |

**(ಐ) ಸಕ್ಕರೆ ಕಾರ್ಖಾನೆಗಳನ್ನು ನಡೆಸುತ್ತಿರುವ ನಾಮ ನಿರ್ದೇಶಿತ ಪ್ರತಿನಿಧಿಗಳು**

(i) **(ಸಹಕಾರಿ ಸಕ್ಕರೆ ಕಾರ್ಖಾನೆಗಳ ನಾಮ ನಿರ್ದೇಶಿತ ಪ್ರತಿನಿಧಿಗಳು**

| | | |
|---|---|---|
| **1** | ಸೋಮೇಶ್ವರ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಸಿದ್ದಸಮುದ್ರ, ಬೈಲಹೊಂಗಲ ತಾಲ್ಲೂಕು, ಬೆಳಗಾವಿ ಜಿಲ್ಲೆ–(ಬೆಳಗಾವಿ ವಿಭಾಗ) | ಸದಸ್ಯರು |
| **2** | ಬೀದರ್ ಸಹಕಾರಿ ಸಕ್ಕರೆ ಕಾರ್ಖಾನೆ, ನಿ. ಹಳ್ಳೀಖೇಡ್, ಹುಮ್ನಾಬಾದ್ ತಾಲ್ಲೂಕು, ಬೀದರ್ ಜಿಲ್ಲೆ –(ಗುಲ್ಬರ್ಗಾ ವಿಭಾಗ) | |

(ii) **ಖಾಸಗಿ ಸಕ್ಕರೆ ಕಾರ್ಖಾನೆಗಳ ನಾಮ ನಿರ್ದೇಶಿತ ಪ್ರತಿನಿಧಿಗಳು**

| | | |
|---|---|---|
| 1 | ಬನ್ನಾರಿ ಅಮ್ಮನ್ ಶುಗರ್ಸ್ ಲಿ. ಅಳಗಂಚಿ ನಂಜನಗೂಡು ತಾ: ಮೈಸೂರು ಜಿಲ್ಲೆ (ಮೈಸೂರು ವಿಭಾಗ) | ಸದಸ್ಯರು |
| 2 | ದಕ್ಷಿಣ ಭಾರತ ಸಕ್ಕರೆ ಕಾರ್ಖಾನೆಗಳ ಒಕ್ಕೂಟದ ಅಧ್ಯಕ್ಷರು – (ಬೆಂಗಳೂರು ವಿಭಾಗ) | |
| 3 | ಪ್ರಭುಲಿಂಗೇಶ್ವರ ಶುಗರ್ಸ್ ಅಂಡ್ ಕೆಮಿಕಲ್ಸ್ ಲಿ. ಸಿದ್ದಾಪುರ, ಜಮಖಂಡಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ–(ಬೆಳಗಾವಿ ವಿಭಾಗ) | |

| | |
|---|---|
| (ಜೆ) ನಿರ್ದೇಶಕರು ಎಸ್.ನಿಜಲಿಂಗಪ್ಪ ಸಕ್ಕರೆ ಸಂಸ್ಥೆ, ಬೆಳಗಾವಿ | ಸದಸ್ಯರು |
| (ಕೆ) ಡಾ:ಜಿ.ಎನ್.ನಾಗರಾಜು, ಪ್ರಾಧ್ಯಾಪಕರು, ಕೃಷಿ ಮಾರುಕಟ್ಟೆ ವ್ಯವಹಾರ ನಿರ್ವಹಣಾ ವಿಭಾಗ, ಕೃಷಿ ಕಾಲೇಜು, ಜಿ.ಕೆ.ವಿ.ಕೆ., ಬೆಂಗಳೂರು. | ಸದಸ್ಯರು |
| (ಎಲ್) ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು | ಸದಸ್ಯ ಕಾರ್ಯದರ್ಶಿ |

ಮೇಲ್ಕಂಡ ಮಂಡಳಿಯು ಕರ್ನಾಟಕ ಕಬ್ಬು (ಖರೀದಿ ಮತ್ತು ಸರಬರಾಜು ನಿಯಂತ್ರಣ) ಅಧಿನಿಯಮ 2013 ಮತ್ತು ಕರ್ನಾಟಕ ಕಬ್ಬು (ಖರೀದಿ ಮತ್ತು ಸರಬರಾಜು ನಿಯಂತ್ರಣ) (ತಿದ್ದುಪಡಿ) ಅಧಿನಿಯಮ 2014ರಲ್ಲಿ ವಹಿಸಲಾದಂಥ ಕರ್ತವ್ಯಗಳು ಮತ್ತು ಪ್ರಕಾರ್ಯಗಳನ್ನು ಕರ್ನಾಟಕ ಕಬ್ಬು ನಿಯಂತ್ರಣ ಮಂಡಳಿ (ವ್ಯವಹಾರ ನಿರ್ವಹಣೆ ಪದ್ಧತಿ) ನಿಯಮ 2013ರಲ್ಲಿ ನಿಗದಿಪಡಿಸಿರುವಂತೆ ನಿರ್ವಹಿಸತಕ್ಕದ್ದು.

ಸರ್ಕಾರದ ಆದೇಶ ದಿನಾಂಕ 06–09–2013ರಲ್ಲಿ, ಕರ್ನಾಟಕ ಕಬ್ಬು (ಖರೀದಿ ಮತ್ತು ಸರಬರಾಜು ನಿಯುಂತ್ರಣ) ಅಧಿನಿಯಮ 2013ರ ಕಂಡಿಕೆ 3(2)ರಂತೆ ರಚಿಸಲಾಗಿದ್ದ ಕಬ್ಬು ನಿಯಂತ್ರಣ ಮಂಡಳಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಆರ್.ನರಸಿಂಹಮೂರ್ತಿರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ(ಸಕ್ಕರೆ)(ಪ್ರ)

ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ

**PR. 875**

**SC. 300**

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ:** ಕರ್ನಾಟಕ ಕಬ್ಬು (ಖರೀದಿ ಮತ್ತು ಸರಬರಾಜು ನಿಯಂತ್ರಣ) (ತಿದ್ದುಪಡಿ) ಅಧಿನಿಯಮ 2014ರ ಕಂಡಿಕೆ 4(ಸಿ)ರಂತೆ ರಾಜ್ಯದ ಸಕ್ಕರೆ ಕಾರ್ಖಾನೆಗಳ ಆದಾಯ ಪ್ರಾಪ್ತಿಯನ್ನು ಲೆಕ್ಕ ಹಾಕುವುದಕ್ಕಾಗಿ ತಜ್ಞರ ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 14 ಶಾಸನ 2013, ದಿ: 12-03-2013
2. ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಐ 69 ಎಸ್‌ಜಿಎಫ್ 2013, ದಿ: 03-08-2013
3. ಸರ್ಕಾರದ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 23 ಶಾಸನ 2014 ದಿ: 28-08-2014
4. ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ಪತ್ರ ಸಂಖ್ಯೆ ಡಿಎಸ್‌ಕೆ/ಎಸ್‌ಟಿಟಿ/05/2014-15, ದಿ: 12-09-2014 ಮತ್ತು ದಿ: 17/18-09-2014

**ಪ್ರಸ್ತಾವನೆ:-**

1. ಮೇಲೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆ ದಿನಾಂಕ 12-03-2013ರಲ್ಲಿ, ಕರ್ನಾಟಕ ಕಬ್ಬು (ಖರೀದಿ ಮತ್ತು ಸರಬರಾಜು ನಿಯಂತ್ರಣ) ಅಧಿನಿಯಮ 2013ನ್ನು (Karnataka Sugarcane (Regulation of Purchase and Supply) Act, 2013) ಹೊರಡಿಸಲಾಗಿರುತ್ತದೆ. ಮೇಲೆ (2)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆ ದಿನಾಂಕ 03-08-2013ರಲ್ಲಿ, ಕರ್ನಾಟಕ ಕಬ್ಬು ನಿಯಂತ್ರಣ ಮಂಡಳಿ (ವ್ಯವಹಾರ ನಿರ್ವಹಣೆ ಪದ್ಧತಿ) ನಿಯಮ 2013 (Karnataka Sugarcane Control Board (Procedure regarding Transaction of Business) Rules 2013)ಅನ್ನು ಹೊರಡಿಸಲಾಗಿರುತ್ತದೆ.
2. ಮೇಲೆ (3)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆ ದಿನಾಂಕ 28-08-2014ರಲ್ಲಿ, ಕರ್ನಾಟಕ ಕಬ್ಬು (ಖರೀದಿ ಮತ್ತು ಸರಬರಾಜು ನಿಯಂತ್ರಣ) (ತಿದ್ದುಪಡಿ) ಅಧಿನಿಯಮ 2014ನ್ನು (Karnataka Sugarcane (Regulation of Purchase and Supply) Act, 2014) ಹೊರಡಿಸಲಾಗಿರುತ್ತದೆ.
3. ಮೇಲೆ (4)ರಲ್ಲಿ ಓದಲಾದ ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ಪತ್ರಗಳಲ್ಲಿ, ಕರ್ನಾಟಕ ಕಬ್ಬು (ಖರೀದಿ ಮತ್ತು ಸರಬರಾಜು ನಿಯಂತ್ರಣ) (ತಿದ್ದುಪಡಿ) ಅಧಿನಿಯಮ 2014ರ ಕಂಡಿಕೆ 4(ಸಿ)ರಂತೆ ಕರ್ನಾಟಕ ರಾಜ್ಯದ ಸಕ್ಕರೆ ಕಾರ್ಖಾನೆಗಳ ಆದಾಯ ಪ್ರಾಪ್ತಿಯನ್ನು ಲೆಕ್ಕ ಹಾಕುವುದಕ್ಕಾಗಿ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ಅಧ್ಯಕ್ಷತೆಯಲ್ಲಿ ತಜ್ಞರ ಸಮಿತಿಯೊಂದನ್ನು ರಚಿಸಿ ಆದೇಶ ಹೊರಡಿಸುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ರಾಜ್ಯದ ಸಕ್ಕರೆ ಕಾರ್ಖಾನೆಗಳ ಆದಾಯ ಪ್ರಾಪ್ತಿಯನ್ನು ಲೆಕ್ಕ ಹಾಕುವುದಕ್ಕಾಗಿ ತಜ್ಞರ ಸಮಿತಿಯನ್ನು ರಚಿಸಲು ತೀರ್ಮಾನಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 240 ಎಸ್‌ಜಿಎಫ್ 2014, ಬೆಂಗಳೂರು ದಿನಾಂಕ: 10-10-2014**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಕಬ್ಬು (ಖರೀದಿ ಮತ್ತು ಸರಬರಾಜು ನಿಯಂತ್ರಣ) (ತಿದ್ದುಪಡಿ) ಅಧಿನಿಯಮ 2014ರ ಕಂಡಿಕೆ 4(ಸಿ)ರಂತೆ ಕರ್ನಾಟಕ ರಾಜ್ಯದ ಸಕ್ಕರೆ ಕಾರ್ಖಾನೆಗಳ ಆದಾಯ ಪ್ರಾಪ್ತಿಯನ್ನು ಲೆಕ್ಕ ಹಾಕಿ ಖಚಿತಪಡಿಸಿಕೊಳ್ಳಲು ಮತ್ತು ಹೆಚ್ಚುವರಿ ಕಬ್ಬು ಬೆಲೆಯನ್ನು ನಿರ್ಧರಿಸುವಲ್ಲಿ ಕಬ್ಬು ನಿಯಂತ್ರಣ ಮಂಡಳಿಗೆ ಸಲಹೆ ನೀಡಲು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಕೆಳಕಂಡ ಸದಸ್ಯರನ್ನೊಳಗೊಂಡ ತಜ್ಞರ ಸಮಿತಿಯನ್ನು ರಚಿಸಿದೆ.

**ಕಬ್ಬು ಮತ್ತು ಸಕ್ಕರೆ ತಜ್ಞರ ಸಮಿತಿ**

| | |
|---|---|
| (ಎ) ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು | - ಅಧ್ಯಕ್ಷರು |
| (ಬಿ) ನಿರ್ದೇಶಕರು, ಎಸ್. ನಿಜಲಿಂಗಪ್ಪ ಸಕ್ಕರೆ ಸಂಸ್ಥೆ, ಬೆಳಗಾವಿ | - ಸದಸ್ಯರು |
| (ಸಿ) ಶ್ರೀ ಟಿ.ಎನ್.ವೆಂಕಟರೆಡ್ಡಿ, ಸಹ ಪ್ರಾಧ್ಯಾಪಕರು, ಬೆಂಗಳೂರು ಕೃಷಿ ವಿಶ್ವವಿದ್ಯಾಲಯ, ಬೆಂಗಳೂರು. | - ಸದಸ್ಯರು |
| (ಡಿ) ಡಾ: ಬಿ.ಟಿ.ನಾಡಗೌಡ, ಬೇಸಾಯ ವಿಜ್ಞಾನಿ, ಕೃಷಿ ಸಂಶೋಧನಾ ಕೇಂದ್ರ ಸಂಕೇಶ್ವರ, ಕೃಷಿ ವಿಶ್ವವಿದ್ಯಾಲಯ, ಧಾರವಾಡ | - ಸದಸ್ಯರು |
| (ಇ) ಶ್ರೀ ಬೀರೇಂದ್ರದಾಸ್, ತಂತ್ರಜ್ಞರು, ಎಸ್.ನಿಜಲಿಂಗಪ್ಪ ಸಕ್ಕರೆ ಸಂಸ್ಥೆ, ಬೆಳಗಾವಿ | - ಸದಸ್ಯರು |
| (ಎಫ್) ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರ ಕಚೇರಿಯ ಕೇಂದ್ರ ಸ್ಥಾನಿಕ ಸಹಾಯಕರು (HQA) | - ಸದಸ್ಯ ಕಾರ್ಯದರ್ಶಿ |

ಮೇಲ್ಕಂಡ ತಜ್ಞರ ಸಮಿತಿಯು ಕರ್ನಾಟಕ ಕಬ್ಬು (ಖರೀದಿ ಮತ್ತು ಸರಬರಾಜು ನಿಯಂತ್ರಣ) ಅಧಿನಿಯಮ 2013 ಮತ್ತು ಕರ್ನಾಟಕ ಕಬ್ಬು (ಖರೀದಿ ಮತ್ತು ಸರಬರಾಜು ನಿಯಂತ್ರಣ) (ತಿದ್ದುಪಡಿ) ಅಧಿನಿಯಮ 2014ರಲ್ಲಿ ವಹಿಸಲಾದಂಥ ಕರ್ತವ್ಯಗಳು ಮತ್ತು ಪ್ರಕಾರ್ಯಗಳನ್ನು ನಿಗದಿಪಡಿಸಿರುವಂತೆ ನಿರ್ವಹಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ.ಆರ್.ನರಸಿಂಹಮೂರ್ತಿರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ(ಸಕ್ಕರೆ)(ಪ್ರ)

ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ

PR. 874

SC. 300

*ಮುದ್ರಕರು ಹಾಗೂ ಪ್ರಕಾಶಕರು:-* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು-59